# ಪುನರ್ಜನ್ಮ ರಹಸ್ಯ





ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



www.thraithashakam.org





# ಪುನರ್ಜನ್ಮ ರಹಸ್ಯ


ಗ್ರಂಥಕರ್ತ

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**






ಗ್ರಂಥ ಮುದ್ರಣ

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 80/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ-ಉತ್ತರಗಳು.
03. ಧರ್ಮ-ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ-ಅಸತ್ಯವಾ?)
06. ದೆವ್ವಗಳಹಾಗೂ-ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ-ಮಹಿಮೆ (ಸತ್ಯವಾ-ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ- ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ-ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ-ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು-963.
38. ಮತ-ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು-ಆಸ್ತಿಕರು.
44. ಹೇತುವಾದ-ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು-ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು-ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು-ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಿಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ – ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ– ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ–ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ – ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು– ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು– ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು–ಆನಂದಮು.
81. ದಶ–ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು– ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು–ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು– ಆರು–ತೊಮ್ಮಿದಿ
89. 6–3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ–ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು–ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ–ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು – ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು–ಅಂತಮು.
114. ಮಾಯ ಮರ್ಮಮು–ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು–ಬೆದುರು
118. ಆಧ್ಯಾತ್ಮಿಕ ಪ್ರಶ್ನಲು–ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036982829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ (ಮಂ), ಅನಂತಪುರ (ಜಿಲ್ಲಾ)
ಸೆಲ್:9620193341, 9739226839

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಮಾರುತಿ ಟೆನ್ಟ್ ರೋಡ್, ಚಾಮರಾಜ
ಮೊಹಲ್ಲ, ಮೈಸೂರ್–547097
Cell : 9986369118

**T.V. ರಮಣ**
ಕತ್ತರಗುಪ್ಪೆ, ಬೆಂಗಳೂರು–560068
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು. ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲಿಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ಪುನರ್ಜನ್ಮ ರಹಸ್ಯ



ತನ್ನ ಜನ್ಮ ಹೇಗೆ ನಡೆದಿದೆ ಎಂದು ತಿಳಿಯದವನು, ಪುನರ್ಜನ್ಮ ವಿಷಯವನ್ನು ಕುರಿತು ಹೇಳಬೇಕೆಂದರೆ ಕಷ್ಟ. ಮೊದಲ ಜನ್ಮ ವಿವರವನ್ನು ತಿಳಿದಾಗ ನಂತರ ಪುನರ್ಜನ್ಮ ವಿಷಯವನ್ನು ತಿಳಿಯಬಹುದು. ಜೀವಿಯು ಜನ್ಮಿಸುವ ಸಮಯದಲ್ಲಿ ಯಾವ ಅನುಭೂತಿಯನ್ನು ಹೊಂದುತ್ತಾನೋ ತಿಳಿದವನು, ಪುನರ್ಜನ್ಮ ಅನುಭವವನ್ನು ಕುರಿತು ಹೇಳಬಲ್ಲನು. ಆದರೆ ಮನುಷ್ಯನಿಗೆ ಜನ್ಮ ವಿವರವೇ ತಿಳಿಯದಿರುವಾಗ, ಅದು ಅವನಿಗೆ ರಹಸ್ಯ ವಾಗುವುದು. ತಿಳಿಯದೆ ಗೋಪ್ಯವಾಗಿ ಇರುವುದು ಯಾವುದಾದರೂ ರಹಸ್ಯವೇ. ಯಾವ ಮನುಷ್ಯನಾದರೂ ತಾನು ಜನ್ಮಿಸುವಾಗ ತನಗೆ ಜ್ಞಾಪಕ ಇದೆಯಾ ಎಂದು ಆಲೋಚಿಸಿಕೊಂಡರೆ ತನಗೇ ತಿಳಿದುಹೋಗುತ್ತದೆ. ಜನ್ಮಿಸಿದ ನಂತರ ಕೆಲವು ತಿಂಗಳುಗಳ ಕಾಲ ಕಳೆದ ನಂತರವಾದರು ಜ್ಞಾಪಕವಿದೆಯೇ ಎಂದು ನೋಡಿದರೆ, ಹಾಗೆ ಒಂದು ವರ್ಷ ಕಳೆದ ನಂತರ ಸಹ ತನಗೆ ಜ್ಞಾಪಕ ಇಲ್ಲವೆಂದೇ ಅರ್ಥವಾಗುತ್ತಿದೆ. ಭೂಮಿ ಮೇಲೆ ಮನುಷ್ಯನಾಗಿ ಹುಟ್ಟಿದ ಯಾರಿಗಾದರೂ, ಒಂದು ವರ್ಷದ ಒಳಗೆ ಜ್ಞಾಪಕ ಇದೆಯೆಂದು ಹೇಳುವುದಕ್ಕೆ ಸಾಧ್ಯವಿಲ್ಲ. ಒಂದು ಸಂವತ್ಸರ(ವರ್ಷ)ವೆ ಅಲ್ಲ ಮತ್ತೊಂದು ಸಂವತ್ಸರವನ್ನು ಸೇರಿಸಿ ಎರಡು ಸಂವತ್ಸರಗಳವರೆಗು ನೋಡಿದರೂ ಜ್ಞಾಪಕವಿರುವ ಆಧಾರಗಳು ಕಾಣಿಸುವುದಿಲ್ಲ. ಚಿಕ್ಕ ವಯಸ್ಸಿನಲ್ಲಿನ ನಿನ್ನ ವಿಷಯಗಳು ನಿನಗೇ ಜ್ಞಾಪಕ ಇಲ್ಲದಿರುವಾಗ, ಕಳೆದ ಜನ್ಮವನ್ನು ಕುರಿತು ಹೇಳಬೇಕೆಂದರೆ ಸಾಧ್ಯವಾಗುತ್ತದೆಯೆ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಸಾಧ್ಯವಿಲ್ಲವೆಂದೇ ಹೇಳಬಹುದು. ಈ ಮಧ್ಯದಲ್ಲಿ ಒಂದು ಟಿ.ವಿ. ಛಾನಲ್‌ನಲ್ಲಿ ಉನ್ನತವಾದ ಓದು ಓದಿರುವ ಒಬ್ಬ ಯಂ.ಡಿ. ಡಾಕ್ಟರು ಎದುರುಗಿರುವ ಮನುಷ್ಯನ ಹತ್ತಿರ ಆ ಮನುಷ್ಯನ ಗತಜನ್ಮ ಅನುಭವಗಳನ್ನು ಹೇಳಿಸಿರುವುದು ನೋಡಿದೆನು. ಅದನ್ನು ನೋಡಿದ ಬಹಳ ಜನ ಮೇಧಾವಿಗಳು ಸಹ ಆ ವಿಷಯಗಳನ್ನು ಬಹಳ ಸುಲಭವಾಗಿ ನಂಬುವುದನ್ನು ನೋಡಿದೆನು. ಆಗ ನಮ್ಮಲ್ಲಿ ಪುನರ್ಜನ್ಮ ರಹಸ್ಯವನ್ನು ಕುರಿತು ತಕ್ಷಣವೆ ಬರೆಯಬೇಕೆಂಬ ಸಂಕಲ್ಪ ಬಂದಿತು. ಮೊದಲಿನಿಂದಲೂ ವಾಸ್ತವವಾಗಿ ಪುನರ್ಜನ್ಮ ರಹಸ್ಯವನ್ನು ಕುರಿತು ಬರೆಯಬೇಕೆಂಬ ಸಂಕಲ್ಪವಿದ್ದರೂ, ಆ

ಕೆಲಸವನ್ನು ಮಾಡುವುದರಲ್ಲಿ ಆಲಸ್ಯ ಏರ್ಪಟ್ಟಿತು. ಆದರೆ ಟಿ.ವಿ. ಛಾನಲ್‌ನಲ್ಲಿ ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಯಿಂದ ಪುನರ್ಜನ್ಮ ಜ್ಞಾಪಕಗಳನ್ನು ಹೇಳಿಸುವುದು ನೋಡಿದರೆ ನಂತರ ನಮ್ಮ ಸಂಕಲ್ಪವು ಕಾರ್ಯರೂಪವಾಗುವುದಕ್ಕೆ ಪ್ರಾರಂಭಿಸಿದೆಯೆಂದು ಹೇಳಬಹುದು.

ಮನುಷ್ಯ ಒಂದುಸಲ ಮರಣಿಸಿದರೆ, ಮತ್ತೊಂದು ಸಲ ಜನ್ಮಿಸುವುದಕ್ಕೆ ಅವಕಾಶ ಇದೆ. ಆದ್ದರಿಂದ ಮೊದಲು ಮರಣ, ನಂತರ ಮತ್ತೆ ಜನನ ಇರುವುದು. ಮೊದಲು ಮರಣವನ್ನು ಹೊಂದಿದ ನಂತರ ತಿರುಗಿ ಹುಟ್ಟುವುದು ನಡೆಯುತ್ತಿದೆ. ಈ ವಿಧಾನವು ಒಂದು ಇಂದೂಮತದಲ್ಲಿಯೇ ಹೊರತು ಇಸ್ಲಾಮ್‌ದಲ್ಲಾಗಲಿ, ಕ್ರೈಸ್ತದಲ್ಲಾಗಲಿ ಒಪ್ಪಿಕೊಳ್ಳುತ್ತಿಲ್ಲ. ಪ್ರಧಾನವಾದ ಕ್ರೈಸ್ತ, ಇಸ್ಲಾಮ್ ಮತಗಳಲ್ಲಿ ಮತ್ತೆ ಹುಟ್ಟುವುದು ಇಲ್ಲವೆಂದು, ಒಂದುಸಲ ಜನ್ಮಿಸಿ, ಒಂದು ಸಲ ಮರಣಿಸುವರೆಂದು ಹೇಳುತ್ತಿರುವುದು ನೋಡಿದ್ದೇವೆ. ಆ ಎರಡು ಮತಗಳ ಮೂಲ ಗ್ರಂಥಗಳಲ್ಲಿಯೂ ಸಹ ಮನುಷ್ಯ ಸತ್ತುಹೋದ ನಂತರ ಆತನು ಮತ್ತೆ ಜನ್ಮಿಸುತ್ತಿದ್ದಾನೆಂದು ಆ ಮತ ಪ್ರವಕ್ತರು ಹೇಳಿರುವಾಗ, ಆ ವಿಷಯವು ಅವರಿಗೆ ಅರ್ಥವಾಗದೆ ಹೋಗಿರುವುದರಿಂದ, ಮನುಷ್ಯನಿಗೆ ಪುನರ್ಜನ್ಮ ಇಲ್ಲವೆಂದು ಹೇಳುತ್ತಿದ್ದಾರೆ. ವಾಸ್ತವವಾಗಿ ಕ್ರೈಸ್ತ, ಇಸ್ಲಾಮ್ ಮತಗ್ರಂಥಗಳಲ್ಲಿಯೂ ಸಹ ಪುನರ್ಜನ್ಮಗಳಿವೆಯೆಂದೇ ಹೇಳಲಾಗಿದೆ. ಆ ಗ್ರಂಥಗಳಲ್ಲಿ ಪುನರ್ಜನ್ಮಕ್ಕೆ ಸಂಬಂಧಿಸಿದ ವಿಷಯಗಳನ್ನು ಸಂದರ್ಭ ಬಂದಾಗ ಪ್ರಸ್ತಾಪಿಸಿ ಹೇಳುತ್ತೇವೆ. ಇಂದೂ (ಹಿಂದೂ) ಮತದಲ್ಲಿನ ಮುಖ್ಯ ಗ್ರಂಥವಾದ ಭಗವದ್ಗೀತೆಯಲ್ಲಿ ಪುನರ್ಜನ್ಮ ಇದೆಯೆಂದು ಶಾಸ್ತ್ರಬದ್ಧವಾಗಿ ಹೇಳಲಾಗಿದೆ. ಮುಖ್ಯವಾದ ಎಲ್ಲಾ ಮತಗಳಲ್ಲಿಯೂ ಪ್ರವಕ್ತರು ಮನುಷ್ಯನಿಗೆ ಮತ್ತೆ ಜನ್ಮ ಇದೆಯೆಂದು ಹೇಳುವುದರಿಂದ, ಅವರ ಮಾತುಗಳನ್ನು ಅನುಸರಿಸಿ ಪುನರ್ಜನ್ಮ ಇದೆಯೆಂದು ವಿಶ್ವಾಸಿಸುತ್ತೇವೆ. ಇಲ್ಲಿ ಮತ ಗ್ರಂಥಗಳು ಹೇಳಿರುವುದರ ಪ್ರಕಾರ ವಿಶ್ವಾಸವಿದೆಯೇ ಹೊರತು, ಅನುಭವವಿಲ್ಲವೆಂದು ಹೇಳುತ್ತಿದ್ದೇವೆ. ವಿಶ್ವಾಸ ವಾಸ್ತವವೂ ಆಗಬಹುದು ಅಥವಾ ಅವಾಸ್ತವವೂ ಆಗಬಹುದು. ಮುಖ್ಯವಾದ ಮೂರು ಮತ ಗ್ರಂಥಗಳಲ್ಲಿ ಹೇಳಿದ ಪುನರ್ಜನ್ಮ ವಿಶ್ವಾಸನೀಯವೇ ಆದರೂ, ಅದು ನಿಜವೋ, ಸುಳ್ಳೋ

ಎಂದು ಪರೀಕ್ಷೆ ಮಾಡಿ ಹೇಳಿಕೊಳ್ಳುವುದಕ್ಕಿಂತ ಮೊದಲು, ಮರಣವನ್ನು ಕುರಿತು ತಿಳಿದುಕೊಳ್ಳಬೇಕು. ಮರಣವನ್ನು ಕುರಿತಾದ ವಿವರವನ್ನು ತಿಳಿದುಕೊಂಡರೆ ನಂತರ ಮತ್ತೆ ಜನ್ಮ ಇರುತ್ತದೋ ಇಲ್ಲವೋ ಎಂದು, ಇದ್ದರೆ ಹೇಗೆ ಸಂಭವಿಸುತ್ತದೋ ಎಂದು ತಿಳಿದುಕೊಳ್ಳುವುದಕ್ಕೆ ಅವಕಾಶವಿದೆ. ಆದ್ದರಿಂದ ಮೊದಲು ಮರಣವನ್ನು ಕುರಿತು ತಿಳಿದುಕೊಳ್ಳೋಣ.

ಮನುಷ್ಯನಿಗೆ ಮರಣ ಮೂರು ವಿಧಗಳಲ್ಲಿ ಇದೆ. ಮನುಷ್ಯನಿಗಿರುವ ಮೂರು ಮರಣಗಳನ್ನು ಕುರಿತು ವಿವರವಾಗಿ **"ಮರಣರಹಸ್ಯ"** ಎನ್ನುವ ಚಿಕ್ಕ ಗ್ರಂಥದಲ್ಲಿ ಬರೆಯಲಾಗಿದೆ. ಒಬ್ಬ ಮನುಷ್ಯ ಮರಣಹೊಂದಿದಾಗ ಮೂರು ಮರಣಗಳಲ್ಲಿ ಯಾವುದನ್ನಾದರೂ ಹೊಂದಿರಬಹುದು. ಕಾಲಮರಣ, ಅಕಾಲ ಮರಣ, ತಾತ್ಕಾಲಿಕ ಮರಣ ಎನ್ನುವ ಮೂರು ಮರಣಗಳಲ್ಲಿ ಮನುಷ್ಯ ಕಾಲಮರಣವನ್ನು ಹೊಂದಿದಾಗ ಮಾತ್ರ ತಕ್ಷಣವೆ ಪುನರ್ಜನ್ಮಕ್ಕೆ ಹೋಗುವನು. ಒಂದುವೇಳೆ ಮನುಷ್ಯ ಅಕಾಲಮರಣ ಹೊಂದಿದರೂ, ತಾತ್ಕಾಲಿಕ ಮರಣವನ್ನು ಹೊಂದಿದರೂ ತಿರುಗಿ ಕಾಲಮರಣ ಸಂಭವಿಸುವವರೆಗೂ, ಮತ್ತೆ ಜನ್ಮಕ್ಕೆ (ಪುನರ್ಜನ್ಮಕ್ಕೆ) ಹೋಗುವುದಕ್ಕೆ ಅವಕಾಶವಿಲ್ಲ. ಮೂರು ಮರಣಗಳಲ್ಲಿ ಒಬ್ಬ ಮನುಷ್ಯ ಒಂದು ಮರಣವನ್ನಾದರೂ ಹೊಂದಬಹುದು, ಅಥವಾ ಎರಡು ಮರಣಗಳನ್ನಾದರೂ ಹೊಂದಬಹುದು, ಅಥವಾ ಮೂರು ಮರಣಗಳನ್ನಾದರೂ ಹೊಂದಬಹುದು. ವಿವರವಾಗಿ ಹೇಳಿದರೆ ಒಬ್ಬ ಮನುಷ್ಯ ಅಕಾಲ ಮರಣವನ್ನು ಹೊಂದಿ ನಂತರ ಸ್ವಲ್ಪ ಕಾಲಕ್ಕೆ ಕಾಲಮರಣವನ್ನು ಹೊಂದಿ ಮರುಜನ್ಮಕ್ಕೆ ಹೋಗುತ್ತಿದ್ದಾನೆ. ಹಾಗೆ ಒಬ್ಬ ಮನುಷ್ಯ ತಾತ್ಕಾಲಿಕ ಮರಣವನ್ನು ಹೊಂದಿ, ನಂತರ ಕಾಲಮರಣವನ್ನು ಹೊಂದಿ ಎರಡನೇ ಜನ್ಮಕ್ಕೆ ಹೋಗುತ್ತಿದ್ದಾನೆ. ಅದೇ ವಿಧವಾಗಿ ಒಬ್ಬ ಮನುಷ್ಯ ಒಂದು ಸಮಯದಲ್ಲಿ ತಾತ್ಕಾಲಿಕ ಮರಣವನ್ನು ಹೊಂದಿ, ನಂತರ ಅಕಾಲಮರಣವನ್ನು ಹೊಂದಿ, ಕೊನೆಗೆ ಕಾಲಮರಣವನ್ನು ಹೊಂದಿ ಪುನರ್ಜನ್ಮಕ್ಕೆ ಹೋಗುತ್ತಿದ್ದಾನೆ. ಇದರಿಂದ ಮನುಷ್ಯ ಅಕಾಲ ಮರಣವನ್ನು ಹೊಂದಿದರೂ, ಅಥವಾ ತಾತ್ಕಾಲಿಕ ಮರಣವನ್ನು ಹೊಂದಿದರೂ, ಕೊನೆಗೆ ಕಾಲಮರಣವನ್ನು ಹೊಂದಬೇಕಾಗಿರುವುದೆ ಎಂದು ತಿಳಿಯುತ್ತಿದೆ.

ಇನ್ನೊಂದು ವಿವರ ಏನೆಂದರೆ! ಮನುಷ್ಯ ಮೊದಲು ಎರಡು ಮರಣಗಳನ್ನು ಹೊಂದದೆ ಒಂದೇಸಲ ಕೊನೆಯದಾದ ಕಾಲಮರಣವನ್ನು ಹೊಂದಬಹುದು. ಅವರವರ ಕರ್ಮದ ಪ್ರಕಾರ ಮರಣಗಳು ಎಷ್ಟು ಹೊಂದಬೇಕು? ಯಾವಾಗ ಹೊಂದಬೇಕು? ಎಂದು ಮೊದಲೇ ನಿರ್ಣಯಿಸಿರುತ್ತದೆ. **ಮರುಜನ್ಮ (ಪುನರ್ಜನ್ಮ) ಬರಬೇಕೆಂದರೆ ಮೊದಲು ಕಾಲಮರಣ ಬರಬೇಕು. ಕಾಲಮರಣವೆ ಮನುಷ್ಯನಿಗೆ ಅಸಲಾದ ಮರಣ.** ಕಾಲ ಮರಣದ ನಂತರವೆ ಮನುಷ್ಯನಿಗೆ ಮತ್ತೊಂದು ಜನ್ಮ ಇರುತ್ತದೆ. ಮನುಷ್ಯ ಯಾವ ಮತದಲ್ಲಿ ಹುಟ್ಟಿದರೂ, ಅವನಿಗೆ ಮೂರೇ ಮರಣಗಳಿರುವವು. ಅದರಲ್ಲಿ ಒಂದು ಕಾಲಮರಣ ತಪ್ಪದೆ ಸಂಭವಿಸುತ್ತದೆ. ಉಳಿದ ಎರಡು ಮರಣಗಳು ಸಂಭವಿಸಬಹುದು ಅಥವಾ ಸಂಭವಿಸದೆ ಇರಬಹುದು.

ಕಾಲಮರಣ ಎಂದರೆ ಪೂರ್ತಿ ಆಯಸ್ಸು ಮುಗಿದ ನಂತರ ಸಂಭವಿಸುವುದು ಎಂದರ್ಥ. ಕಾಲಮರಣವನ್ನು ಸಂಪೂರ್ಣ ಮರಣ ಎಂದು ಅನ್ನಬಹುದು. ಉಳಿದ ಎರಡು ಮರಣಗಳಾದ ಅಕಾಲಮರಣ, ತಾತ್ಕಾಲಿಕ ಮರಣಗಳನ್ನು ಅಸಂಪೂರ್ಣ ಮರಣಗಳೆಂದು ಅನ್ನಬಹುದು. ಏಕೆಂದರೆ! ಈ ಎರಡು ಮರಣಗಳಿಂದ ತಕ್ಷಣವೆ ಎರಡನೇ ಜನ್ಮ ಬರುವುದಿಲ್ಲ. ಅದ್ದರಿಂದ ಇವುಗಳನ್ನು ಅಸಂಪೂರ್ಣ ಮರಣಗಳೆಂದು ಅನ್ನಬಹುದು. **ಪುನರ್ಜನ್ಮ ಸಂಪೂರ್ಣ ಮರಣವನ್ನು ಹೊಂದಿದವನಿಗೆ ಬರುತ್ತದೆ.** ಆದ್ದರಿಂದ ಈಗ ನಾವು ಅಸಲಾದ ಮರಣವನ್ನು ಕುರಿತು ತಿಳಿದುಕೊಳ್ಳೋಣ. ಈ ಮರಣವನ್ನು ಕುರಿತು **"ಜನನ ಮರಣ ಸಿದ್ಧಾಂತ"**ದಲ್ಲಿ, ಹಾಗೆಯೇ **"ಮರಣ ರಹಸ್ಯ"**ದಲ್ಲಿ ಹೇಳಿರುವುದಾಗಿ ಈಗಲೂ ಸಹ ಸಂದರ್ಭಾನುಸಾರ ಸ್ವಲ್ಪ ವಿವರವನ್ನು ಹೇಳಿಕೊಳ್ಳೋಣ. ಒಬ್ಬ ಮನುಷ್ಯನ ಸಜೀವ ಶರೀರ ಕೆಲವು ಭಾಗಗಳಿಂದ ಏರ್ಪಟ್ಟಿದೆ. ಒಂದು ಭಾಗ ಎಂದರೆ ಎಷ್ಟು ಎಂದಾಗಲಿ, ಒಂದು ಭಾಗವಾಗಿ ಹೇಗೆ ಹೇಳುತ್ತಿದ್ದಾರೆಂದಾಗಲಿ, ಯಾರಾದರು ಪ್ರಶ್ನಿಸಿದರೆ ಅವರಿಗೆ ಉತ್ತರವನ್ನು ಈ ವಿಧವಾಗಿ ಹೇಳಬಹುದು. ಒಂದು ಮುದ್ದೆಯಂತೆ ಕಾಣಿಸುವ ಶರೀರದಲ್ಲಿ ಭಾಗಗಳನ್ನು ಗುರುತಿಸುವುದಕ್ಕೆ ಒಂದು ಸೂತ್ರವಿದೆ. ಅದೇನೆಂದರೆ! ಒಂದು

ಶರೀರದಲ್ಲಿ ಪ್ರತ್ಯೇಕಿಸಿ ಒಂದು ಕೆಲಸವನ್ನು ಮಾಡುವುದನ್ನು ಒಂದು ಭಾಗವೆಂದು ಗುರುತಿಸಬಹುದು. ಆ ವಿಧವಾಗಿ ನಮ್ಮ ಶರೀರದಲ್ಲಿ ಒಟ್ಟು 26 ವಿಧಗಳ ಕೆಲಸಗಳು ಮಾಡುವ ಭಾಗಗಳು ಇವೆ. ಅದರಲ್ಲಿ ಕೆಲಸವನ್ನನುಸರಿಸಿ ಕಾಣಿಸುವವು, ಕಾಣಿಸದೆ ಇರುವವು ಎಂದು ಎರಡು ವಿಧಗಳು ಸಹ ಇವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಒಂದು ಶರೀರದಲ್ಲಿ ಒಂದು ಭಾಗವು ಒಂದೇ ಕೆಲಸವನ್ನು ಮಾಡುವುದೆನ್ನುವ ಮಾತಿನಲ್ಲಿನ ಅಂತರಾರ್ಥವೇನೆಂದರೆ! ಶರೀರದಲ್ಲಿ ಒಂದು ಭಾಗ ಮಾಡುವ ಕೆಲಸಗಳನ್ನು ಇನ್ನೊಂದು ಏನೂ ಮಾಡದಿರುವಾಗ ಅದನ್ನು ಒಂದು ಭಾಗವೆಂದು ಲೆಕ್ಕಿಸಬಹುದು. ಇದರಿಂದ ನಮಗೆ ಅರ್ಥವಾಗುವುದು ಏನೆಂದರೆ! ಒಂದು ಕೆಲಸವಾಗಲಿ ಅಥವಾ ಎರಡು ಕೆಲಸಗಳಾಗಲಿ, ಅದಕ್ಕಿಂತ ಹೆಚ್ಚಿನ ಕೆಲಸಗಳಾಗಲಿ, ಶರೀರದಲ್ಲಿ ನಿಯಮಿತ ಹೆಸರಿರುವ ಒಂದೇ ಮಾಡುತ್ತಿರುವಾಗ, ಅದನ್ನು ಒಂದು ಭಾಗವೆಂದು ಲೆಕ್ಕಿಸಬಹುದು. ಈ ವಿಧವಾಗಿ ಶರೀರದಲ್ಲಿ ನಿಯಮಿತ ಕೆಲಸಗಳನ್ನು ಮಾಡುವ ನಿಯಮಿತ ಹೆಸರಿರುವ ಭಾಗಗಳು ಒಟ್ಟು 26 ಇವೆಯೆಂದು ಹೇಳಿಕೊಂಡಿದ್ದೇವೆ. ಕೆಲಸ ಮಾಡದ ಪರಮಾತ್ಮ ಸಹ ಇದೆ. ಅದನ್ನು ಸೇರಿಸಿದರೆ 27 ಭಾಗಗಳಾಗುವವು. ಅದು ಕೆಲಸ ಮಾಡುವುದಿಲ್ಲವಾದ್ದರಿಂದ ಅದನ್ನು ಭಾಗವಾಗಿ ತೆಗೆದುಕೊಳ್ಳುವುದಿಲ್ಲ.

ಒಂದು ಸಜೀವ ಶರೀರವನ್ನು 26 ಭಾಗಗಳ ಮಿಶ್ರಣ(ಕೂಟಮಿ) ಎಂದು ಹೇಳಿದಾಗ, ಅದರಲ್ಲಿ ಕಾಣಿಸುವ ಮತ್ತು ಕಾಣಿಸದಿರುವ ಎರಡು ವಿಧಗಳ ಭಾಗಗಳು ಇವೆಯೆಂದು ಹೇಳಬಹುದು. ಕಾಣಿಸುವ ಭಾಗಗಳನ್ನು ಸ್ಥೂಲ ಶರೀರವೆಂದು, ಕಾಣಿಸದಿರುವ ಭಾಗಗಳನ್ನು ಸೂಕ್ಷ್ಮ ಶರೀರವೆಂದು ಶರೀರವನ್ನು ಎರಡು ಭಾಗಗಳಾಗಿ ವಿಭಜಿಸಿ ಹೇಳಬಹುದು. ಕಾಣಿಸುವ ಸ್ಥೂಲ ಶರೀರ ಹತ್ತು ಭಾಗಗಳಾಗಿದ್ದರೆ, ಕಾಣಿಸದಿರುವ ಸೂಕ್ಷ್ಮಶರೀರ ಹದಿನಾರು ಭಾಗಗಳಾಗಿ ಇದೆ. ಒಂದು ಶರೀರವನ್ನು ಸ್ಥೂಲ, ಸೂಕ್ಷ್ಮ ಎರಡು ಭಾಗಗಳಾಗಿ ವಿಭಜಿಸುವುದೇ ಅಲ್ಲದೆ ಶರೀರವನ್ನು ಪ್ರಕೃತಿ ಭಾಗಗಳೆಂದು, ಆತ್ಮ ಭಾಗಗಳೆಂದು ಎರಡು ಭಾಗಗಳಾಗಿ ವಿಭಜಿಸಬಹುದು. ಶರೀರದಲ್ಲಿನ ಸೂಕ್ಷ್ಮಭಾಗ ಸ್ಥೂಲ

ಭಾಗಗಳು ಎರಡು ಸೇರಿ 26 ಆಗಿದ್ದರೆ, ಅದರಲ್ಲಿ 24 ಪ್ರಕೃತಿ ಭಾಗಗಳಿದ್ದು, ಕೇವಲ ಎರಡು ಮಾತ್ರ ಆತ್ಮ ಭಾಗಗಳಿವೆ. ಅವುಗಳನ್ನು ಒಟ್ಟಾರೆ ಕೆಳಗೆ ವಿವರವಾಗಿ ನೋಡೋಣ.

**1)** ಕಣ್ಣು
**2)** ಕಿವಿ
**3)** ಮೂಗು
**4)** ನಾಲಿಗೆ
**5)** ಚರ್ಮ
**6)** ಕೈ
**7)** ಕಾಲು
**8)** ಬಾಯಿ
**9)** ಗುದ
**10)** ಗುಹ್ಯ
**11)** ವ್ಯಾನ ವಾಯು
**12)** ಉದಾನ ವಾಯು
**13)** ಸಮಾನ ವಾಯು
**14)** ಪ್ರಾಣ ವಾಯು
**15)** ಅಪಾನ ವಾಯು
**16)** ದೃಷ್ಟಿ (ನೋಟ)
**17)** ಶಬ್ದ
**18)** ವಾಸನೆ
**19)** ರುಚಿ
**20)** ಸ್ಪರ್ಶ
**21)** ಮನಸ್ಸು
**22)** ಬುದ್ಧಿ
**23)** ಚಿತ್ತ
**24)** ಅಹಂ
**25)** ಜೀವಾತ್ಮ
**26)** ಆತ್ಮ
**27)** ಪರಮಾತ್ಮ

**ಸ್ಥೂಲಶರೀರ 10 ಭಾಗಗಳು** (1–10)

**ಸೂಕ್ಷ್ಮ ಶರೀರ 16 ಭಾಗಗಳು** (11–26)

**ಸ್ತ್ರೀ ಭಾಗಗಳು 24 (ಪ್ರಕೃತಿ ಭಾಗಗಳು** (1–24)

**ಪುರುಷ ಭಾಗಗಳು 2 (ಆತ್ಮ ಭಾಗಗಳು)** (25–26)

ಸ್ಥೂಲ ಶರೀರದಲ್ಲಿ ಮುಖ್ಯವಾದದ್ದು ಕಣ್ಣು. **"ಜ್ಞಾನೇಂದ್ರಿಯಾನಾಮ್ *ನಯನಮ್ ಪ್ರಧಾನಮ್*"** ಎನ್ನುವ ವಾಕ್ಯದ ಪ್ರಕಾರ ಜ್ಞಾನೇಂದ್ರಿಯಗಳಲ್ಲಿ ಕಣ್ಣು ಮುಖ್ಯವಾದದ್ದು. ಸ್ಥೂಲಶರೀರದಲ್ಲಿ ಐದು ಜ್ಞಾನೇಂದ್ರಿಯಗಳು, ಮತ್ತು ಐದು ಕರ್ಮೇಂದ್ರಿಯಗಳು ಇವೆ. ಸ್ಥೂಲ ಶರೀರ ಹತ್ತು ಭಾಗಗಳಾದರೆ, ಅದರಲ್ಲಿ ಐದು ಜ್ಞಾನೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳು ಇವೆ. ಜ್ಞಾನೇಂದ್ರಿಯಗಳಲ್ಲಿ ಕಣ್ಣು ದೃಶ್ಯವನ್ನು ತೋರಿಸುತ್ತದೆ. ಒಟ್ಟಾರೆ ಶರೀರದಲ್ಲಿ ಕಣ್ಣು ಹೊರಗಿನ ದೃಶ್ಯಗಳನ್ನು ಮಾತ್ರ ತೋರಿಸುತ್ತಿದೆ. ಶರೀರದಲ್ಲಿ ದೃಶ್ಯವನ್ನು ತೋರಿಸುವ ಪರಿಕರವು ಒಂದೇ ಒಂದು ಕಣ್ಣು ಮಾತ್ರ ಇದೆ. ಶರೀರದಲ್ಲಿ ಕಣ್ಣು ಮಾಡುವ ಕೆಲಸವನ್ನು ಯಾವುದೂ ಮಾಡುವುದಿಲ್ಲ. ಪ್ರತ್ಯೇಕವಾದ ಕೆಲಸವನ್ನು ಮಾಡುವುದು, ಪ್ರತ್ಯೇಕವಾದ ಭಾಗವಾಗಿ ಇದೆಯೆನ್ನುವ ಸೂತ್ರದ ಪ್ರಕಾರ, ದೇಹದಲ್ಲಿ ಕಣ್ಣು ಒಂದು ಭಾಗವಾಗಿ ಲೆಕ್ಕಿಸಲ್ಪಡುತ್ತಿದೆ. ಈ ವಿಧವಾಗಿ ಶರೀರದಲ್ಲಿ ಒಟ್ಟು 28 ಕಾರ್ಯಗಳು 26 ಭಾಗಗಳಿಂದ ನಡೆಯುತ್ತಿವೆ. ದೇಹದಲ್ಲಿನ 26 ಭಾಗಗಳಲ್ಲಿ ಮನಸ್ಸು, ಆತ್ಮ ಎನ್ನುವ ಎರಡು ಪ್ರತ್ಯೇಕಿಸಿ ಒಂದೊಂದು ಎರಡು ಕೆಲಸಗಳು ಮಾಡುತ್ತಿವೆ. ಶರೀರದಲ್ಲಿನ 24 ಭಾಗಗಳು ಒಂದೊಂದು ಕೆಲಸವನ್ನು ಮಾಡಿದರೆ, ಮನಸ್ಸು ಎರಡು ಕೆಲಸಗಳನ್ನು, ಆತ್ಮ ಎರಡು ಕೆಲಸಗಳನ್ನು ಮಾಡುತ್ತಿವೆ. ಹಾಗೆ ಮನಸ್ಸು, ಆತ್ಮ ಒಂದು ಕೆಲಸವನ್ನು ಅಧಿಕವಾಗಿ ಮಾಡುವುದರಿಂದ ಶರೀರದಲ್ಲಿ ಒಟ್ಟು ಕೆಲಸಗಳು 28 ಎಂದು ಗುರುತಿಸಲ್ಪಟ್ಟಿವೆ. ಮಾನವ ಜೀವನವೆಲ್ಲಾ ಮಾನವನ ಶರೀರದಲ್ಲಿ ಕೇವಲ 28 ಕೆಲಸಗಳು ಮಾತ್ರ ನಡೆಯುತ್ತಿವೆ. ಆದರೆ ಒಬ್ಬ ಮನುಷ್ಯ ಹೊರಗೆ ಸಾವಿರ ವ್ಯಾಪಾರಗಳು, ಸಾವಿರ ವ್ಯವಹಾರಗಳನ್ನು ನೆರವೇರಿಸುವ ಮೇಧಾವಿ ಆದರೂ ಸಹ ತನ್ನ ಶರೀರದಲ್ಲಿ ನಡೆಯುವ 28 ಕೆಲಸಗಳನ್ನು ಗುರುತಿಸದೆ ಹೋಗುತ್ತಿದ್ದಾರೆ. ಹೊರಗೆ ಸಾವಿರ ವ್ಯಾಪಾರಗಳನ್ನು ಮಾಡಿ, ಸಾವಿರ ಕೋಟಿ ಹಣವನ್ನು ಸಂಪಾದಿಸಿದರೂ, ಎಷ್ಟೊ ವ್ಯವಹಾರಗಳನ್ನು ನಡೆಸಿ ದೇಶಕ್ಕೆ ಪ್ರಧಾನಮಂತ್ರಿ ಆದರೂ, **ಯಾವನು ಎಂತಹವನಾದರೂ ಅವನ ಶರೀರದಲ್ಲಿ ನಡೆಯುವವು 28 ಕೆಲಸಗಳು ಮಾತ್ರ.** ಆದರೆ ಆ 28 ಕೆಲಸಗಳು ತನ್ನ ಶರೀರದಲ್ಲಿ

ಹುಟ್ಟಿದಾಗಿನಿಂದ ನಡೆಯುತ್ತಿದ್ದರೂ, ಆ 28 ಕೆಲಸಗಳು ಏನೋ, ಅವುಗಳನ್ನು ಯಾವ ಭಾಗಗಳು ಮಾಡುತ್ತಿವೆಯೋ, ಖಚಿತವಾಗಿ ಮನುಷ್ಯ ಹೇಳಲಾಗದ ಸ್ಥಿತಿಯಲ್ಲಿ ಇದ್ದಾನೆ.

ನಾನು ಯಂ.ಡಿ. ಡಾಕ್ಟರ್ ಶರೀರದಲ್ಲಿನ ಪ್ರತಿ ಭಾಗವು ನನಗೆ ಗೊತ್ತು, ಹಾಗೆಯೇ ಶರೀರದಲ್ಲಿನ ಪ್ರತಿ ಭಾಗ ಮಾಡುವ ಕೆಲಸ ಸಹ ನನಗೆ ತಿಳಿದಿದೆಯೆಂದು ಯಾರಾದರು ಅನ್ನಬಹುದು. ಅಷ್ಟೇ ಅಲ್ಲದೆ ಅವರಿಗೆ ಶರೀರದಲ್ಲಿ 26 ಭಾಗಗಳೆ ಅಲ್ಲದೆ ನೂರು ಭಾಗಗಳು ಕಾಣಿಸುವವು. ಆದರೆ ಸೂಕ್ಷ್ಮ ಶರೀರದಲ್ಲಿನ ಹದಿನೈದು ಭಾಗಗಳು ಕಾಣಿಸುವುದಿಲ್ಲ. ಅವು ಯಾವ ಪರಿಕರಗಳಿಗಾಗಲಿ ಯಾವ ಸ್ಕ್ಯಾನಿಂಗುಗಳಿಗಾಗಲಿ ತಿಳಿಯುವುದಿಲ್ಲ. ಉದಾಹರಣೆಗೆ ಮನಸ್ಸು ಎನ್ನುವುದು ಶರೀರದಲ್ಲಿನ ಭಾಗವೆ ಆದರೂ ಅದು ಕಾಣಿಸುವುದಿಲ್ಲ. ಅದನ್ನು ಯಾವ ಪರಿಕರವು, ಯಾವ ಸ್ಕ್ಯಾನಿಂಗುಗಳು, ಎಕ್ಸರೆಗಳು ಗುರುತಿಸಲಾರವು, ನೋಡಲಾರವು, ತೋರಿಸಲಾರವು. ಆದ್ದರಿಂದ ವೈದ್ಯ ವೃತ್ತಿಯಲ್ಲಿ ಯಂ.ಡಿ ಡಾಕ್ಟರ್‌ಗಳಿಗೂ ಸಹ ತಿಳಿಯದಿರುವ ಭಾಗಗಳಿವೆ ಯೆಂದು ಹೇಳಬಹುದು. ಆಧ್ಯಾತ್ಮಿಕ ವಿದ್ಯೆಯನ್ನು ಅಭ್ಯಾಸಿಸಿ, ಬ್ರಹ್ಮ ವಿದ್ಯಾಶಾಸ್ತ್ರವನ್ನು ತಿಳಿದವರಿಗೆ ಮಾತ್ರ ಶರೀರದಲ್ಲಿ ಕಾಣದಿರುವ ಭಾಗಗಳು ಸಹ ತಿಳಿಯುತ್ತವೆ. ಹಾಗೆ ಅವು ಮಾಡುವ ಕೆಲಸಗಳು ಸಹ ತಿಳಿಯುತ್ತವೆ. ಒಬ್ಬ ಡಾಕ್ಟರ್ ಶರೀರದಲ್ಲಿನ ಸ್ಥೂಲಭಾಗಗಳನ್ನು ಕುರಿತು ಹೇಳಬಲ್ಲನು, ಸೂಕ್ಷ್ಮ ಭಾಗಗಳನ್ನು ಕುರಿತು ಹೇಳಲಾರನು. ಶರೀರದಲ್ಲಿ ಸ್ಥೂಲವಾಗಿ ನಡೆಯುವ ಕೆಲಸವನ್ನನುಸರಿಸಿ ಈತನು ಬದುಕಿದ್ದಾನೆ ಅಥವಾ ಸತ್ತುಹೋಗಿದ್ದಾನೆಂದು ಹೇಳುತ್ತಾನೆ. ಆದರೆ ಅದಕ್ಕೆ ಕಾರಣವಾದ ಕಾಣಿಸದ ಕರ್ಮವನ್ನು ಕುರಿತು ಹೇಳುವುದಿಲ್ಲ. ಒಬ್ಬ ಡಾಕ್ಟರ್‌ಗೆ ತಿಳಿಯದ ಎಷ್ಟೋ ಸೂಕ್ಷ್ಮ ವಿಷಯಗಳು ಒಬ್ಬ ಆಧ್ಯಾತ್ಮಿಕನಿಗೆ ತಿಳಿಯುವುದು. ಹಾಗೆ ಒಬ್ಬ ಆಧ್ಯಾತ್ಮಿಕನಿಗೆ ತಿಳಿಯದ ಎಷ್ಟೋ ಸ್ಥೂಲ ವಿಷಯಗಳು ಡಾಕ್ಟರ್‌ಗೆ ತಿಳಿಯುವುದು. ಆತ್ಮಗಳ ವಿಷಯದಲ್ಲಿ, ದೈವಜ್ಞಾನದಲ್ಲಿ, ಅಧ್ಯಾತ್ಮಿಕ ರಂಗದಲ್ಲಿ ಸ್ಥೂಲಕ್ಕಿಂತ ಸೂಕ್ಷ್ಮಕ್ಕೇ ಹೆಚ್ಚಿನ ಪ್ರಾಧಾನ್ಯತೆ

ಇದೆ. ಆದರೆ ಡಾಕ್ಟರ್‌ಗೆ ತಿಳಿಯದ ರಹಸ್ಯಗಳು ಅಧ್ಯಾತ್ಮಿಕರಿಗೆ ಹೆಚ್ಚಿಗೆ ತಿಳಿಯುವುದೆಂದು ಹೇಳಬಹುದು.

ಒಬ್ಬ ಮನುಷ್ಯನನ್ನು ಪರೀಕ್ಷಿಸಿ ಸತ್ತುಹೋಗಿದ್ದಾನೆಂದು ಹೇಳಿದ ಡಾಕ್ಟರ್‌ಗೆ, ಆ ಮನುಷ್ಯನ ಶರೀರದ ಒಳಗೆ ಕೊನೆಯ ನಿಮಿಷದಲ್ಲಿ ಏನು ನಡೆದಿದೆ, ಮನಸ್ಸು ಯಾವ ಕೆಲಸ ಮಾಡುತ್ತಿದೆ, ಬುದ್ಧಿ ಹೇಗೆ ಕೆಲಸ ಮಾಡುತ್ತಿದೆಯೆಂದು ತಿಳಿಯದು. ಭೌತಿಕ ಶಾಸ್ತ್ರಜ್ಞರಿಗೆ ಸ್ಥೂಲ ಅವಯವಗಳ ಕೆಲಸ ಮಾತ್ರವೆ ತಿಳಿಯುತ್ತದೆ. ಆದರೆ ಸೂಕ್ಷ್ಮವಾದ ಜೀವಾತ್ಮದ ವಿಷಯ ತಿಳಿದಿಲ್ಲ. ಆದ್ದರಿಂದ ಶರೀರದಲ್ಲಿ ಜೀವಿ ಇದ್ದರೂ, ಶ್ವಾಸ ಆಡದಷ್ಟು ಮಾತ್ರಕ್ಕೆ ಸತ್ತು ಹೋಗಿದ್ದಾನೆಂದು ಹೇಳಿದ ಸಂಘಟನೆಗಳು ಇವೆ. ಹಾಗೆ ಸತ್ತು ಹೋಗಿದ್ದಾನೆಂದು ಹೇಳಿದ ನಂತರ ಕೆಲವು ಗಂಟೆಗಳಿಗೆ, ಕೆಲವು ದಿನಗಳಿಗೆ ಎದ್ದು ಬಂದಿರುವವರು ಇದ್ದಾರೆ. ಹಾಗೇ ಮನುಷ್ಯನ ಹುಟ್ಟಿನಲ್ಲಿ ಶಿಶುವು ಶರೀರದೊಳಗೆ ಜೀವಿ ಬಾರದೆ ಆ ಶರೀರ ಕದಲದಿರುವ ಮಾತ್ರಕ್ಕೆ, ಶ್ವಾಸ ಆಡದ ಮಾತ್ರಕ್ಕೆ ಮೊದಲೇ ಸತ್ತು ಹೋಗಿದ್ದಾನೆಂದು, ಗರ್ಭದಲ್ಲಿಯೇ ಸತ್ತುಹೋಗಿದ್ದಾನೆಂದು ಡಾಕ್ಟರ್‌ಗಳು ಹೇಳಿರುವುದು ಬಹಳ ಕಡೆ ನಡೆದಿದೆ. ಅಂತಹ ಶಿಶುಗಳು ಕೆಲವು ಗಂಟೆಗಳ ನಂತರ ಪ್ರಾಣ ಬಂದು ಬದುಕಿದವರು ಸಹ ಬಹಳ ಜನ ಇದ್ದಾರೆ. ಇವೆಲ್ಲವನ್ನು ಪರಿಶೀಲಿಸಿ ನೋಡಿದರೆ ಒಬ್ಬ ಡಾಕ್ಟರ್‌ಗೆ ಸ್ಥೂಲ ಶರೀರವನ್ನು ಕುರಿತು ಸಂಪೂರ್ಣವಾಗಿ ತಿಳಿಯುವುದು, ಆದರೆ ಸೂಕ್ಷ್ಮ ಶರೀರವನ್ನು ಕುರಿತು ತಿಳಿದಿಲ್ಲವೆಂದೇ ಹೇಳಬಹುದು. ಹಾಗೆ ಆಧ್ಯಾತ್ಮಿಕ ವಿದ್ಯೆಯನ್ನು ತಿಳಿದವರಿಗೆ ಸೂಕ್ಷ್ಮ ಶರೀರವನ್ನು ಕುರಿತು ತಿಳಿಯುವುದಾಗಲಿ, ಸ್ಥೂಲ ಶರೀರವನ್ನು ಕುರಿತು ಸರಿಯಾಗಿ ತಿಳಿದಿಲ್ಲವೆಂದು ಹೇಳಬಹುದು. ಇನ್ನು ಬ್ರಹ್ಮವಿದ್ಯೆಯಲ್ಲಿ ಜ್ಞಾನವುಳ್ಳ ಆಧ್ಯಾತ್ಮಿಕರು ಕೆಲವರು ಸ್ಥೂಲವನ್ನು ಕುರಿತಾಗಲಿ, ಸೂಕ್ಷ್ಮವನ್ನು ಕುರಿತಾಗಲಿ ಚೆನ್ನಾಗಿ ತಿಳಿದಿರುವರು. ಸ್ಥೂಲ ಸೂಕ್ಷ್ಮಗಳನ್ನು ತಿಳಿದ ಬ್ರಹ್ಮವಿದ್ಯಾವಂತರು ಭೂಮಿಯಮೇಲೆ ಅಪರೂಪ ವಾಗಿ ಇರುವರು. ಅಂತಹವರು ಮಾತ್ರವೇ ಜನನ ವಿಷಯಗಳಾಗಲಿ, ಮರಣ

ವಿಷಯಗಳಾಗಲಿ ನಿರೂಪಿಸಿ ಹೇಳುವರು. ಜನನ ಮರಣ ರಹಸ್ಯಗಳನ್ನು ಪೂರ್ತಿಯಾಗಿ ತಿಳಿದಿರುತ್ತಾರೆ. ಅವರು ತಿಳಿಸಿದರೇನೆ ಇತರ ಮನುಷ್ಯರಿಗೆ ಅ ರಹಸ್ಯಗಳು ತಿಳಿಯುತ್ತವೆ. ಅಂತಹ ಬ್ರಹ್ಮವಿದ್ಯಾಶಾಸ್ತ್ರಜ್ಞರು ಅಲ್ಲದೆ ಭೌತಿಕ ಶರೀರ ಶಾಸ್ತ್ರಜ್ಞರಾಗಲಿ, ವೈದ್ಯರಾಗಲಿ ಜನನ ಮರಣಗಳ ವಿವರಗಳನ್ನು ತಿಳಿಯಲಾರರು. ಒಂದು ವೇಳೆ ತಿಳಿದಹಾಗೆ ಹೇಳಿದರೂ, ಅವರು ಹೇಳಿದ ವಿಷಯಗಳು ಸತ್ಯವಾಗಿರುವುದಿಲ್ಲ. ನಿರೂಪಣೆಗೆ ಬರುವುದಿಲ್ಲ.

ಪುನರ್ಜನ್ಮ ಬರಬೇಕೆಂದರೆ ಅದಕ್ಕಿಂತ ಮೊದಲು ಮರಣ ಇರಲೇ ಬೇಕು. ಮೊದಲು ಮರಣಿಸದೆ ಹುಟ್ಟುವವರು ಯಾರೂ ಇರುವುದಿಲ್ಲ. ಸೃಷ್ಠಿ ನಡೆದಾಗ ದೇವರೆ ಸ್ವತಃವಾಗಿ ಜೀವರಾಶಿಗಳನ್ನು ಸೃಷ್ಠಿಸಿದಾಗ ಮಾತ್ರ ಎಲ್ಲರ ಜನ್ಮಗಳು ಮರಣ ಇಲ್ಲದೆ ಜನ್ಮದಿಂದಲೆ ಪ್ರಾರಂಭವಾಗುತ್ತವೆ. ನಂತರ ಹುಟ್ಟಿದವನು ಸತ್ತುಹೋಗುವುದು ತಪ್ಪುವುದಿಲ್ಲ, ಸತ್ತುಹೋದವನು ತಿರುಗಿ ಹುಟ್ಟುವುದು ತಪ್ಪುವುದಿಲ್ಲ. ಇದರಿಂದ ಸೃಷ್ಠಿ ನಂತರ ಭಗವದ್ಗೀತೆಯಲ್ಲಿ ಸಾಂಖ್ಯಯೋಗ 27ನೇ ಶ್ಲೋಕದಲ್ಲಿ ಹೇಳಿದಹಾಗೆ ***"ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ"*** ಹುಟ್ಟಿದವನು ಸಾಯುವುದು ತಪ್ಪುವುದಿಲ್ಲ. ಸತ್ತವನು ಹುಟ್ಟುವುದು ತಪ್ಪುವುದಿಲ್ಲ ಎಂದಿದೆ. ಗೀತೆಯಲ್ಲಿ ಭಗವಂತನು ಮೊದಲು ಹೇಳಿದ ಪದವು ***"ಜಾತಸ್ಯ"*** ಎನ್ನುವುದರಲ್ಲಿ ಮೊದಲು ಹುಟ್ಟಿದವನು ಎಂದು ಅರ್ಥವಾಗುತ್ತಿದೆ. ಭಗವದ್ಗೀತೆಯಲ್ಲಿ ಭಗವಂತನು ಯೋಚಿಸಿ ಯಾವ ಮಾತನ್ನು ಮೊದಲು ಹೇಳಬೇಕೊ ಯಾವ ಮಾತನ್ನು ಹಿಂದೆ ಹೇಳಬೇಕೋ ಹಾಗೆಯೇ ಹೇಳಿದ್ದಾನೆ. ಆದ್ದರಿಂದ **ಹುಟ್ಟಿದವನು ಸತ್ತುಹೋಗುವುದು ದೃಡೀಕರಿಸಲಾಗಿದೆ** ಎಂದು ಹೇಳಿದ್ದಾನೆ. ನಂತರ **ಸತ್ತುಹೋಗಿರುವವನು ಜನ್ಮಿಸುವ ಹಾಗೆ ನಿರ್ಣಯ ಮಾಡಲಾಗಿದೆಯೆಂದು** ಹೇಳಿದ್ದಾನೆ. ಆ ಶ್ಲೋಕದಲ್ಲಿ ಮೊದಲ ವಾಕ್ಯ ಸೃಷ್ಠಿಸಿದ ನಂತರ ನಡೆಯುವುದೆಂದು, ಅದರಲ್ಲಿ ಮೊದಲ ಹುಟ್ಟನ್ನು ಕುರಿತು **ಜಾತಸ್ಯ** ಎಂದು ಹೇಳಲಾಗಿದೆ. ಹಾಗೆಯೇ ಮರಣಿಸಿದ ನಂತರ ಜನ್ಮ ನಡೆಯುತ್ತದೆಂದು ಎರಡನೇ ವಾಕ್ಯದಲ್ಲಿ ಹೇಳಲಾಗಿದೆ. ಆದ್ದರಿಂದ ಸೃಷ್ಠಿಸಲ್ಪಟ್ಟ ಪ್ರತಿ ಜೀವಿ

ಸಾಯದೆ ತಪ್ಪುವುದಿಲ್ಲ, ಸತ್ತುಹೋದ ಪ್ರತಿಜೀವಿ ಹುಟ್ಟುವುದು ತಪ್ಪುವುದಿಲ್ಲವೆಂದು ಹೇಳಲಾಗಿದೆ. ಒಬ್ಬನು ಭೂಮಿಯಮೇಲೆ ನಾವು ನೋಡುವಹಾಗೆ ಹುಟ್ಟಿದ್ದಾನೆಂದರೆ ಆತನು ಒಂದು ಕ್ಷಣ ಹುಟ್ಟುವುದಕ್ಕಿಂತ ಮೊದಲು ಸತ್ತುಹೋಗಿರಬೇಕು. ಉದಾಹರಣೆಗೆ ಒಬ್ಬನ ಜನನ ಸಾಯಂಕಾಲ ಐದುಗಂಟೆ ಮೂರು ನಿಮಿಷಕ್ಕಾದರೆ, ಅವನ ಮರಣ ಸಹ ಸಾಯಂಕಾಲ ಐದು ಗಂಟೆ ಎರಡು ನಿಮಿಷಗಳ ಐವತ್ತೊಂಬತ್ತು ಸೆಕೆಂಡುಗಳಿಗೆ ನಡೆದಿದೆಯೆಂದು ಅರ್ಥ. ಒಬ್ಬನು ಹುಟ್ಟಿದ್ದಾನೆಂದರೆ ಅದಕ್ಕಿಂತ ಒಂದು ಸೆಕೆಂಡು ಮೊದಲು ಅವನು ಸತ್ತುಹೋಗಿರುತ್ತಾನೆ. ಆದ್ದರಿಂದ ಸತ್ತವನು ಹುಟ್ಟದೆ ತಪ್ಪುವುದಿಲ್ಲ ಎಂದು **"ಧ್ರುವಮ್ ಜನ್ಮ ಮೃತಸ್ಯಚ"** ಎಂದು ಹೇಳಿದ್ದಾರೆ.

ಈ ವಿಧವಾಗಿ ಬ್ರಹ್ಮವಿದ್ಯಾ ಶಾಸ್ತ್ರವನ್ನು ಅನುಸರಿಸಿ ಸಾವು ಹುಟ್ಟುಗಳಿವೆ, ಆ ವಿಷಯವು ನಮಗೆ ತಿಳಿದಿಲ್ಲ. ಆದ್ದರಿಂದ ಕೆಲವರು ತಮ್ಮ ಹುಟ್ಟಿದ ದಿನ ಹಬ್ಬವನ್ನು ಮಾಡಿಕೊಳ್ಳುತ್ತಿದ್ದಾರೆ. ಆದರೆ ಅದು ಅವರ ಸತ್ತ ದಿನವೆಂದು ಅವರಿಗೆ ಸ್ವಲ್ಪವೂ ತಿಳಿದಿಲ್ಲ. ಗತದಲ್ಲಿ ನನ್ನ ಹುಟ್ಟಿದ ದಿನದಂದು ಹೇಳಿದ ಉಪನ್ಯಾಸದಲ್ಲಿ "ಇದು ನನಗೆ ಹುಟ್ಟಿದದಿನವೇ ಆದರೂ, ಅದಕ್ಕಿಂತ ಮೊದಲು ಇದು ನನ್ನ ಸತ್ತ ದಿನ, ನಂತರ ಹುಟ್ಟಿದ ದಿನ. ಆದ್ದರಿಂದ ನಾನು ಹುಟ್ಟಿದ ದಿನದಂದು ತಪ್ಪದೆ ಸತ್ತ ದಿನವನ್ನು ಸಹ ಜ್ಞಾಪಕ ಮಾಡಿಕೊಳ್ಳುತ್ತೇನೆ" ಎಂದು ಹೇಳಿದ್ದೇನೆ. ಆದರೆ ಬಹಳ ಜನರಿಗೆ ತಮ್ಮ ಹುಟ್ಟಿದ ದಿನವೇ ಸತ್ತ ದಿನವೆಂದು ತಿಳಿದಿಲ್ಲ. **ಭೂಮಿಮೇಲೆ ಯಾರಿಗಾದರು ಪುನರ್ಜನ್ಮ ಇದೆಯೆ ಹೊರತು ಜನ್ಮ ಇಲ್ಲ**. ಜನ್ಮ ಎಂದರೆ ಮೊದಲು ಹುಟ್ಟಿರುವುದು, ಪುನರ್ಜನ್ಮ ಎಂದರೆ ಮತ್ತೆ ಮತ್ತೆ ಹುಟ್ಟುವುದು. ನಾವು ಸೃಷ್ಠಿ ಆದಿಯಲ್ಲಿ ಸೃಷ್ಠಿಕರ್ತನಿಂದ ಜನ್ಮವನ್ನು ಹೊಂದಿದ್ದೇವೆ. ನಂತರ ಪ್ರಕೃತಿಯಿಂದ ಪುನರ್ಜನ್ಮಿಸುತ್ತಿದ್ದೇವೆ. ಆದರೆ ಪುನರ್ಜನ್ಮವಲ್ಲದ ಜನ್ಮವನ್ನು ಯಾರೂ ಹೊಂದುವುದಿಲ್ಲ. ಮೊದಲು ಸೃಷ್ಠಿ ತಯಾರಾದಾಗ ಜನ್ಮಿಸಿದ ನಾವು ನಂತರ ಪುನರ್ಜನ್ಮಿಸುತ್ತಿದ್ದೇವೆ. ಇದರಿಂದ ಪ್ರಸ್ತುತ ಕಾಲದಲ್ಲಿ ಭೂಮಿಮೇಲೆ ಜೀವಿಸುವ ಪ್ರತಿ ಒಬ್ಬರದು ಪುನರ್ಜನ್ಮವೆಂದೇ

ಹೇಳಬಹುದು. ಪುನರ್ಜನ್ಮ ಹೊಂದಿದ ಪ್ರತಿ ಮನುಷ್ಯನಿಗೆ ಗತ ಜನ್ಮದ ವಿಷಯ ತಿಳಿದಿಲ್ಲ. ಗತ ಜನ್ಮದಲ್ಲಿ ಜೀವಿಸಿ ನಂತರ ಪುನರ್ಜನ್ಮ ಹೊಂದಿದ್ದರೂ, ಕಳೆದ ಜನ್ಮದಲ್ಲಿ ಎಷ್ಟೋ ಕಷ್ಟಗಳು ಅನುಭವಿಸಿದ್ದರೂ, ಹಿಂದಿನ ಜನ್ಮ ಯಾರಿಗೂ ಜ್ಞಾಪಕವಿರುವುದಿಲ್ಲ. ಹಾಗೆ ಜ್ಞಾಪಕ ಇಲ್ಲದೆ ಹೋಗುವುದಕ್ಕೆ ಕಾರಣ ಹಿಂದಿನ ಜನ್ಮದಲ್ಲಿದ್ದ ಶರೀರ ಪುನರ್ಜನ್ಮದಲ್ಲಿ ಇಲ್ಲ. ಗತ ಜನ್ಮದಲ್ಲಿನ ಶರೀರವಾಗಲಿ, ಶರೀರದ ಭಾಗಗಳಾಗಲಿ ಯಾವುವು ಈ ಜನ್ಮದಲ್ಲಿ ಇರುವುದಿಲ್ಲ. ಜೀವಿಯು ಮರಣಿಸಿ ಹೊಸ ಜನ್ಮ ಹೊಂದಿದಾಗ, ಆತ್ಮ ಸಂಬಂಧವಾದ ಭಾಗಗಳು ಮಾತ್ರ ಜೀವಿಯ ಹಿಂದೆ ಇದ್ದು, ಪ್ರಕೃತಿ ಸಂಬಂಧವಾದ ಭಾಗಗಳೆಲ್ಲ ನಶಿಸುತ್ತಿವೆ. ಪುನರ್ಜನ್ಮದಲ್ಲಿ ಜೀವಾತ್ಮನ ಹಿಂದೆ ಆತ್ಮ ಪರಮಾತ್ಮ ಎರಡೂ ಇವೆ. ಆದರೆ ಪ್ರಕೃತಿ ಸಂಬಂಧವಾದ 24 ಭಾಗಗಳು ಪೂರ್ತಿ ನಶಿಸಿಹೋಗುತ್ತವೆ. ಅದರಲ್ಲಿ ಜ್ಞಾಪಕ ಎನ್ನುವ ಕೆಲಸವನ್ನು ಮಾಡುವ ಮನಸ್ಸು ಸಹ ಇಲ್ಲದೆ ನಶಿಸುತ್ತಿದೆ. ಜ್ಞಾಪಕವನ್ನು ಒದಗಿಸುವ ಮನಸ್ಸು ಗತ ಜನ್ಮದಲ್ಲಿನ ಮರಣದಲ್ಲಿ ಹೋಗುತ್ತದೆ. ಆದ್ದರಿಂದ ಗತಜನ್ಮ ಜ್ಞಾಪಕಗಳು ಎರಡನೇ ಜನ್ಮದಲ್ಲಿ ಇಲ್ಲದೆ ಹೋಗಿವೆ. ಹಾಗೆ ಗತಜನ್ಮದಲ್ಲಿ ಒಳ್ಳೆಯ ತಿಳಿವಳಿಕೆಗಳುಳ್ಳವನು ಎರಡನೇ ಜನ್ಮದಲ್ಲಿಯೂ ಸಹ ಹಾಗೇ ಬುದ್ಧಿವಂತನಾಗಿ ಇರುತ್ತಾನೆನ್ನುವುದಕ್ಕೆ ಸಾಧ್ಯವಿಲ್ಲ. ಏಕೆಂದರೆ ಒಬ್ಬ ಮನುಷ್ಯ ಬುದ್ಧಿವಂತನಾಗಿ ಪ್ರವರ್ತಿಸುವುದು, ಆತನ ಶರೀರದಲ್ಲಿನ ಬುದ್ಧಿಯ ಒಂದು ಕೆಲಸವನ್ನನುಸರಿಸಿ ಇರುವುದು. ಒಬ್ಬನಿಗೆ ಚುರುಕಾದ ಬುದ್ಧಿ ಇದ್ದರೆ, ಅವನ ತಿಳುವಳಿಕೆ ದೊಡ್ಡದಾಗಿ ಇರುವುದು. ಅಂತಹ ತಿಳುವಳಿಕೆ ಗತಜನ್ಮದಲ್ಲಿ ಇರುವವನಿಗೆ ಆ ಜನ್ಮ ಕೊನೆಯಲ್ಲಿ ಬಂದ ಮರಣದಲ್ಲಿ ಆತನ ಬುದ್ಧಿ ನಶಿಸಿಹೋಗುತ್ತದೆ. ಆದರೆ ಪುನರ್ಜನ್ಮದಲ್ಲಿ ಆತನಿಗೆ ಅದೇ ತಿಳುವಳಿಕೆ ಇರುತ್ತದೆಂದು ಹೇಳಲಾಗದು. ಕಳೆದ ಜನ್ಮದಲ್ಲಿನ ಶರೀರ ಭಾಗಗಳ ಕೆಲಸವನ್ನನುಸರಿಸಿ ಗತಜನ್ಮ ಜೀವನ ನಡೆಯುತ್ತಿರುತ್ತದೆ. ಪ್ರಸ್ತುತ ಇರುವ ಎರಡನೇ ಜನ್ಮದಲ್ಲಿ (ಪುನರ್ಜನ್ಮ) ಹೊಸ ಶರೀರ, ಹೊಸ ಭಾಗಗಳು ಬಂದಿರುವುದರಿಂದ ತಿಳುವಳಿಕೆಯಾಗಲಿ, ಜ್ಞಾಪಕಶಕ್ತಿಯಾಗಲಿ, ಎಲ್ಲಾ ವ್ಯತ್ಯಾಸದಿಂದ ಕಾಣಿಸುವುದು. ಗತ ಜನ್ಮದಲ್ಲಿನ ಶರೀರವಾಗಲಿ, ಶರೀರ

ಭಾಗಗಳಾಗಲಿ ಜೀವಾತ್ಮನ ಹಿಂದೆ ಎರಡನೇ ಜನ್ಮದೊಳಗೆ ಬರುವುದಿಲ್ಲ. ಆದರೆ ಎರಡನೆ ಜನ್ಮದಲ್ಲಿ ಮೊದಲ ಜನ್ಮ ಜ್ಞಾಪಕಗಳಾಗಲಿ, ತಿಳುವಳಿಕೆಗಳಾಗಲಿ ಮೊದಲಾದವುಗಳು ಇಲ್ಲದೆ ಹೋಗಿ ಎಲ್ಲಾ ಕೆಲಸಗಳು ಬೇಧವಾಗಿಯೆ ಇರುವವು. ಮರಣದಲ್ಲಿ ಶರೀರದಲ್ಲಿನ 24 ಪ್ರಕೃತಿ ಭಾಗಗಳಿಗೆ ಮಾತ್ರವೇ ನಾಶ ಇದೆ. ಜೀವಿಯು ಮರಣದಲ್ಲಿ ನಶಿಸುವುದಿಲ್ಲ. ಹಾಗೇ ಆತ್ಮ ನಶಿಸುವುದಿಲ್ಲ. ಮರಣದಲ್ಲಿ ಪ್ರಕೃತಿ ಭಾಗಗಳಾದ ಒಟ್ಟು 24 ಭಾಗಗಳು ಜೀವಾತ್ಮನನ್ನು, ಆತ್ಮವನ್ನು ಬಿಟ್ಟು ಹೋಗುತ್ತವೆ. ಆತ್ಮ ಭಾಗಗಳು ಅಥವಾ ಪುರುಷ ಭಾಗಗಳಾದ ಜೀವಾತ್ಮ, ಆತ್ಮ ಎರಡೂ ನಶಿಸದೆ ಎರಡನೇ ಜನ್ಮಕ್ಕೆ ಬರುತ್ತವೆ. ಪ್ರಕೃತಿ ಅಥವಾ ಸ್ತ್ರೀ ಭಾಗಗಳಾದ 24 ಶರೀರ ಭಾಗಗಳಿಗೆ ಪುನರ್ಜನ್ಮ ಇರುವುದಿಲ್ಲ. ಅವು ಒಂದೇ ಸಲ ಹುಟ್ಟಿ, ಒಂದೇ ಸಲ ನಶಿಸಿ ಹೋಗುತ್ತವೆ. ಅವುಗಳನ್ನು ಪ್ರಕೃತಿಯೆ ತಯಾರು ಮಾಡುತ್ತದೆ. ಆದ್ದರಿಂದ ಅವುಗಳನ್ನು ಪ್ರಕೃತಿ ಭಾಗಗಳೆಂದು, ಸ್ತ್ರೀ ಭಾಗಗಳೆಂದು ಕರೆಯುತ್ತಿದ್ದೇವೆ.

ಪ್ರಕೃತಿ ಭಾಗಗಳಾದ ಶರೀರದಲ್ಲಿನ 24 ಭಾಗಗಳು ಒಂದು ಯಂತ್ರದಲ್ಲಿನ ಪರಿಕರಗಳ ಹಾಗೆ ಕೆಲಸ ಮಾಡುತ್ತಿವೆ. ಆದ್ದರಿಂದ ಅವುಗಳಿಗೆ ಪಾಪ ಪುಣ್ಯಗಳು ಇಲ್ಲ. ಅವು ಪುನಃ ಹುಟ್ಟುವುದಿಲ್ಲ. ತಿರುಗಿ ಹುಟ್ಟುವುದು ಜೀವಾತ್ಮ ಮತ್ತು ಆತ್ಮ. ಆತ್ಮ ಶರೀರದಲ್ಲಿ ಎರಡು ವಿಧಗಳ ಕೆಲಸವನ್ನು ಮಾಡುತ್ತಿದ್ದು, ಆತ್ಮಕ್ಕೆ ಸಹ ಪಾಪ ಪುಣ್ಯಗಳು ಅಂಟುವುದಿಲ್ಲ. ಉದಾಹರಣೆಗೆ ದೇಶದಲ್ಲಿನ ಪೌರನು ಯಾರಾದರೂ ತನ್ನ ಶತ್ರುವನ್ನು ಸಾಯಿಸಿದರೆ, ಅವನಿಗೆ ನ್ಯಾಯಾಲಯದಲ್ಲಿ 302 ಸೆಕ್ಷನ್ ಅನ್ವಯಿಸುತ್ತದೆ. ಹಾಗೆ ಪೂರ್ತಿ ಸಾಯಿಸದೆ ಸ್ವಲ್ಪ ಗಾಯಪಡಿಸಿ ಬಿಟ್ಟರೂ, ಆತನಿಗೆ ಹತ್ಯಾ ಪ್ರಯತ್ನ ಆರೋಪಣೆ ಕೆಳಗೆ 307 ಸೆಕ್ಷನ್ ಅನ್ವಯಿಸುತ್ತದೆ. ಆ ಸೆಕ್ಷನ್‌ಗಳ ಪ್ರಕಾರ ಅವನಿಗೆ ನ್ಯಾಯಸ್ಥಾನದಲ್ಲಿ ಶಿಕ್ಷೆ ಬೀಳುತ್ತದೆ. ಇದು ದೇಶದಲ್ಲಿನ ಒಬ್ಬ ಪೌರನಿಗೆ ಸಂಬಂಧಿಸಿದ ವಿಷಯವಾದರೆ, ದೇಶದ ಭದ್ರತೆಗಾಗಿ ದೇಶದ ಸರಹದ್ದಿನಲ್ಲಿ ಕೆಲಸ ಮಾಡುವ ಸೈನಿಕನು ಹತ್ತು ಜನ ಶತ್ರುಗಳನ್ನು ಸಾಯಿಸಿದರೂ, ಆತನಿಗೆ 302 ಸೆಕ್ಷನ್ ಅನ್ವಯಿಸುವುದಿಲ್ಲ. ಒಂದು

ವೇಳೆ ಆತನು ಶತ್ರುವನ್ನು ಗಾಯಪಡಿಸಿದರೂ, ಆತನಿಗೆ 307 ಸೆಕ್ಷೆನ್ ಸಹ ಅನ್ವಯಿಸುವುದಿಲ್ಲ. ಏಕೆಂದರೆ ಆತನು ಪ್ರಭುತ್ವಕ್ಕಾಗಿ, ಪ್ರಭುತ್ವ ಅಧೀನದಲ್ಲಿ ಕೆಲಸ ಮಾಡುತ್ತಿದ್ದಾನೆ ಆದ್ದರಿಂದ ಆತನಿಗೆ ಪ್ರಭುತ್ವ ಕಾನೂನಾಗಲಿ ಕಾನೂನಿನೊಳಗಿನ ಸೆಕ್ಷೆನ್‌ಗಳಾಗಲಿ ಅನ್ವಯಿಸುವುದಿಲ್ಲ. ಹಾಗೆ ಶರೀರದಲ್ಲಿನ ದೇವರ ಅದೀನದಲ್ಲಿ ಇದ್ದು ದೇವರ ಯಂತ್ರಾಂಗದಲ್ಲಿ ಕೆಲಸ ಮಾಡುತ್ತಿರುವ ಪ್ರಕೃತಿ ಶರೀರ ಭಾಗಗಳಿಗೆ ದೇವರ ಕಾನೂನು ಅನ್ವಯಿಸುವುದಿಲ್ಲ. ದೇವರ ಧರ್ಮದ ಪ್ರಕಾರ ಬರುವ ಪಾಪ ಪುಣ್ಯಗಳು ಶರೀರ ಭಾಗಗಳಿಗೆ ಅಂಟುವುದಿಲ್ಲ. ಅವುಗಳಿಗೆ ಕರ್ಮಇಲ್ಲ. ಅವುಗಳಿಗೆ ಅನುಭವವೂ ಇಲ್ಲ. ಆದ್ದರಿಂದ ಒಂದು ಜನ್ಮದಲ್ಲಿ ಜೀವಾತ್ಮನೊಂದಿಗೆ ಶರೀರದಲ್ಲಿ ಇರುವ ಮನಸ್ಸು ಆ ಜನ್ಮದಲ್ಲಿಯೆ ಅಂತ್ಯವಾಗಿ ಹೋಗುತ್ತಿದೆ. ಜೀವಿಯು ಮಾತ್ರ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸಿ ಪುನರ್ಜನ್ಮವನ್ನು ಹೊಂದುತ್ತಿದ್ದಾನೆ. ಜೀವಿಯು ಎರಡನೇ ಜನ್ಮದಲ್ಲಿ, ಎರಡನೇ ಶರೀರದಲ್ಲಿ ಇದ್ದಾಗ ಅದಕ್ಕಿಂತ ಮೊದಲ ಜನ್ಮದಲ್ಲಿನ ಮನಸ್ಸಾಗಲಿ, ಬುದ್ಧಿಯಾಗಲಿ ಇರುವುದಿಲ್ಲ. ಎರಡನೇ ಜನ್ಮದಲ್ಲಿ ಜೀವಾತ್ಮ ನೊಂದಿಗೆ ಹೊಸ ಮನಸ್ಸು, ಹೊಸ ಬುದ್ಧಿ ನಿವಾಸಿಸುತ್ತವೆ. ಜೀವನದಲ್ಲಿ ಶರೀರದಲ್ಲಿನ ಜ್ಞಾಪಕಗಳ ಕೆಲಸವನ್ನು ಮನಸ್ಸು ಮಾತ್ರವೆ ಮಾಡುತ್ತಿದೆ. ಗತ ಜನ್ಮದಲ್ಲಿನ ಜ್ಞಾಪಕಗಳೆಲ್ಲ ಅ ಮನಸ್ಸು ಹೋದಾಗಲೆ ಅದರ ಹಿಂದೆಯೇ ಹೋಗಿರುತ್ತವೆ. ಆದ್ದರಿಂದ ಗತಜನ್ಮ ಜ್ಞಾಪಕಗಳು ಯಾರಿಗು ಇರುವುದಿಲ್ಲ. ನಾವು ಗತಜನ್ಮದಿಂದ ಪ್ರಸ್ತುತವಿರುವ ಜನ್ಮಕ್ಕೆ ಬಂದಿದ್ದೇವೆ. ನಮಗು ಸಹ ಗತಜನ್ಮ ಜ್ಞಾಪಕವಿಲ್ಲ. ಅದಕ್ಕೆ ಕಾರಣ ಗತ ಜನ್ಮದಲ್ಲಿ ನಮ್ಮ ಶರೀರದಲ್ಲಿ ನಮ್ಮ ಜೊತೆಗಿರುವ ಮನಸ್ಸು ಈಗ ಇಲ್ಲ. ಆದ್ದರಿಂದ ಗತ ಜನ್ಮದಲ್ಲಿನ ಜ್ಞಾಪಕಗಳು ಈ ಜನ್ಮದಲ್ಲಿ ಇಲ್ಲದೆ ಹೋಗಿವೆ.

ಒಬ್ಬ ಮನುಷ್ಯನಿಗೆ ಪ್ರಸ್ತುತ ಕಾಲದಲ್ಲಿ ಇರುವುದು ಪುನರ್ಜನ್ಮ ಆದರೂ, ಗತದಲ್ಲಿ ಇಂತಹ ಪುನರ್ಜನ್ಮಗಳು ಮನುಷ್ಯನಿಗೆ ಎಷ್ಟು ಬಂದಿವೆ ಎಂದು ಪ್ರಶ್ನಿಸಿಕೊಂಡು ನೋಡಿದರೆ, ಸೃಷ್ಠಿ ಪ್ರಾರಂಭವಾದಾಗಿನಿಂದ ಎಷ್ಟೋ ಜನ್ಮಗಳು

ಬಂದಿವೆ ಎಂದು ಹೇಳಬಹುದು. ಆದರೆ ಖಂಡಿತವಾಗಿ ಎಷ್ಟು ನಡೆದಿವೆ ಎಂದು ಹೇಳುವುದಕ್ಕೆ ಸಾಧ್ಯವಿಲ್ಲ. ಸೃಷ್ಠಿ ಆದಿಯಿಂದ ಜನ್ಮಗಳು ಇದ್ದರೂ, ಗತಜನ್ಮ ಜ್ಞಾಪಕಗಳು ಮನುಷ್ಯನಿಗೆ ಇಲ್ಲದಿರುವುದರಿಂದ ಎಷ್ಟುಸಲ ಜನ್ಮಿಸಿರುವುದೆಂದು ಹೇಳಲಾರೆವು. ಆದ್ದರಿಂದ ಭಗವದ್ಗೀತೆಯಲ್ಲಿ ಜ್ಞಾನಯೋಗ ದಲ್ಲಿ ಐದನೇ ಶ್ಲೋಕ **"ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವಚಾರ್ಜುನಾ, ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂತಪ"** ಎಂದು ಭಗವಂತನು ಹೇಳಿದ್ದಾನೆ. ಇದರ ಭಾವನೆ ಏನೆಂದರೆ! "ಅರ್ಜುನಾ! ಇಲ್ಲಿಯವರೆಗೂ ನನಗೆ ಎಷ್ಟೋ ಜನ್ಮಗಳು ಉಂಟಾಗಿವೆ, ಹಾಗೆಯೇ ನಿನಗೂ ಸಹ ಎಷ್ಟೋ ಜನ್ಮಗಳು ಬಂದಿವೆ, ಆದರೆ ಅವುಗಳನ್ನು ಕ್ರಮವಾಗಿ ನಾನು ತಿಳಿದಿದ್ದೇನೆ. ಆದರೆ ನೀನು ನಿನ್ನ ಗತ ಜನ್ಮಗಳನ್ನು ಸ್ವಲ್ಪ ಮಾತ್ರವೂ ಹೇಳಲಾರೆ. ಅವು ನಿನಗೆ ಜ್ಞಾಪಕವಿಲ್ಲ" ಎಂದು ಭಗವಾನ್ ಶ್ರೀಕೃಷ್ಣನು ಸ್ವತಃವಾಗಿ ಹೇಳಿದ್ದಾನೆ. ಆ ದಿನ ಅರ್ಜುನನಿಗೇ ತಿಳಿಯದೆಂದು ಹೇಳಿದಹಾಗೆ, ಈಗ ನಮಗೂ ಸಹ ತಿಳಿದಿಲ್ಲ. ನಾವು ಸೃಷ್ಠಿ ಆರಂಭವಾದಾಗಿನಿಂದ ಈ ಭೂಮಿಮೇಲೆಯೇ ಸಾಯುತ್ತಾ ಹುಟ್ಟುತ್ತಿದ್ದೇವೆ. ಇಲ್ಲಿಗೆ ಎಷ್ಟೋ ಜನ್ಮಗಳು ಬದಲಾಗಿವೆ. ಆದರೆ ನನಗಾಗಲಿ, ನಿನಗಾಗಲಿ ಮತ್ಯಾರಿಗಾಗಲಿ ಹಿಂದಿನ ಜನ್ಮ ಜ್ಞಾಪಕಗಳು ಇಲ್ಲ. ಇರುವುದಕ್ಕೆ ಅವಕಾಶವೆ ಇಲ್ಲ.

ಈಗ ಕೆಲವರು ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಕೃಷ್ಣನು ಸಹ ಮನುಷ್ಯನೆ ತಾನೆ! ಆತನೆ ಸ್ವಂತವಾಗಿ ನನಗೆ ಎಷ್ಟೋ ಜನ್ಮಗಳು ಬಂದಿವೆ ಎಂದಿದ್ದಾನೆ. ಹಾಗೆ ಅರ್ಜುನನಿಗೆ ಸಹ ಎಷ್ಟೋ ಜನ್ಮಗಳು ಬಂದಿವೆ ಎಂದಿದ್ದಾನೆ. ಹಾಗಿರುವಾಗ ಅವರ ಶರೀರದಲ್ಲಿನ ಮನಸ್ಸು ಯಾವ ಜನ್ಮಕ್ಕಿರುತ್ತದೋ ಆ ಜನ್ಮದಲ್ಲಿಯೇ ಅಂತ್ಯವಾಗಿ ಹೋಗಿರಬೇಕು ಅಲ್ಲವೆ! ಅರ್ಜುನನಿಗೆ ಗತದಲ್ಲಿನ ಮನಸ್ಸು ಇಲ್ಲ, ಆದ್ದರಿಂದ ಆತನಿಗೆ ಎಷ್ಟು ಜನ್ಮಗಳು ಕಳೆದಿವೆ ಎಂದು ಹೇಳಲಾರನು. ಆದರೆ ಕೃಷ್ಣನು ತನಗೆ ಎಷ್ಟು ಜನ್ಮಗಳು ಬಂದಿವೆಯೊ ಅವುಗಳನ್ನು ಕ್ರಮವಾಗಿ ಹೇಳುತ್ತೇನೆ ಎಂದಿದ್ದಾನೆ, ಕೃಷ್ಣನ ಮನಸ್ಸು

ಸಹ ಗತ ಜನ್ಮಗಳಲ್ಲಿ ಮರಣದೊಂದಿಗೆ ಇಲ್ಲದೇ ಹೋದಾಗ, ಕೃಷ್ಣನು ತನ್ನ ಗತ ಜನ್ಮಗಳನ್ನು ಹೇಗೆ ಹೇಳುತ್ತಾನೆ? ಎಂದು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಏನೆಂದರೆ! ಅಲ್ಲಿ ಕೃಷ್ಣನು ಹೇಳಿದ ಮಾತು ವಾಸ್ತವವೆ. ಆದರೆ ಆತನ ಮಾತು ವಾಸ್ತವ ಎನ್ನುವುದಕ್ಕೆ ಮೊದಲು ಮನಸ್ಸನ್ನು ಕುರಿತು ಸ್ವಲ್ಪ ವಿಷಯವನ್ನು ತಿಳಿದುಕೊಳ್ಳಬೇಕಾಗಿದೆ. ನಮ್ಮ ಶರೀರದಲ್ಲಿ ಪ್ರಕೃತಿ ಭಾಗಗಳಾದವುಗಳಲ್ಲಿ ಸೂಕ್ಷ್ಮ ಶರೀರದಲ್ಲಿ ಮನಸ್ಸು ಎಲ್ಲಾ ಭಾಗಗಳಿಗಿಂತ ವಿಭಿನ್ನವಾಗಿ ಪ್ರತ್ಯೇಕಿಸಿ ಎರಡು ಕೆಲಸಗಳನ್ನು ಮಾಡುತ್ತಿದೆ. ಶರೀರದಲ್ಲಿ ಬಾಹ್ಯೇಂದ್ರಿಯಗಳು, ಅಂತರೇಂದ್ರಿಯಗಳೆಂದು ಎರಡು ಭಾಗಗಳಿವೆ. ಬಾಹ್ಯೇಂದ್ರಿಯಗಳೆಲ್ಲ ಹೊರಗೆ ಕಾಣಿಸುವ ಸ್ಥೂಲಶರೀರವಾಗಿ ಇವೆ. ಅಂತರೇಂದ್ರಿಯಗಳೆಲ್ಲವೂ ಕಾಣಿಸದ ಸೂಕ್ಷ್ಮಶರೀರವಾಗಿ ಇವೆ. ಹೊರಗಿನ ವಿಷಯವನ್ನು ಶೇಖರಿಸುವವು ಸ್ಥೂಲಶರೀರದಲ್ಲಿನ ಐದು ಜ್ಞಾನೇಂದ್ರಿಯಗಳು. ಕಣ್ಣು, ಮೂಗು, ಕಿವಿ, ನಾಲಿಗೆ, ಚರ್ಮ ಎನ್ನುವ ಐದು ಜ್ಞಾನೇಂದ್ರಿಯಗಳು ಹೊರಗೆ ಶೇಖರಿಸಿದ ಸಮಾಚಾರವನ್ನು, ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು ತೆಗೆದುಕೊಂಡು ಹೋಗಿ ಒಳಗಿರುವ ಬುದ್ಧಿಗೆ ತಿಳಿಸುವುದು. ನಂತರ ಬುದ್ಧಿ ಹೇಳಿದ ನಿರ್ಣಯವನ್ನು ಅಥವಾ ಕೆಲಸವನ್ನು ಮನಸ್ಸು ಹೊರಗಿನ ಕರ್ಮೇಂದ್ರಿಯಗಳಾದ ಕಾಲು, ಕೈಗಳು, ಬಾಯಿ, ಗುದ, ಗುಹ್ಯ ಎನ್ನುವ ಹೊರಗಿನ ಇಂದ್ರಿಯಗಳಿಗೆ ತಿಳಿಸುತ್ತದೆ. ಇದು ಮನಸ್ಸು ಮಾಡುವ ಮೊದಲ ಕೆಲಸ. ನಂತರ ಮನಸ್ಸು ಮಾಡುವ ಎರಡನೇ ಕೆಲಸವನ್ನು ಕುರಿತು ತಿಳಿಯೋಣ.

ಮನಸ್ಸು ಎನ್ನುವ ಹೆಸರು ಬರುವುದಕ್ಕು ಸಹ ಒಂದು ಕಾರಣವಿದೆ. ಮನನ ಮಾಡುವುದು ಮನಸ್ಸೆಂದು ಹಿರಿಯರು ಹೇಳುತ್ತಿದ್ದಾರೆ. ಮನನ ಎಂದರೆ ಜ್ಞಾಪಕ ಎಂದು ಅರ್ಥ. ಮಾನವನ ಜೀವನದಲ್ಲಿ ಕ್ಷಣಕ್ಷಣವು ಎಷ್ಟೋ ಕಾರ್ಯಗಳು, ಎಷ್ಟೋ ಸಂಘಟನೆಗಳು ನಡೆಯುತ್ತವೆ. ಅವುಗಳೆಲ್ಲವನ್ನು ಮನಸ್ಸು ತನ್ನಲ್ಲಿಯೆ ಅಡಗಿಸಿಕೊಂಡಿರುವಾಗ ಅವಶ್ಯ ಬಂದಾಗ ಅವುಗಳನ್ನು ಜ್ಞಾಪಕಗಳ ರೂಪದಲ್ಲಿ ಹೊರಗೆ ತರುವುದು. ಇದು ಮನಸ್ಸೊಂದರ ಎರಡನೇ ಕೆಲಸ

ಆದರೂ ಇದೇ ಮನಸ್ಸಿಗೆ ಮುಖ್ಯವಾದ ಕೆಲಸ. ಮನಸ್ಸನ್ನು ಜ್ಞಾಪಕಗಳ ಹುತ್ತ ಎಂದು ಸಹ ಕೆಲವರು ಹೇಳುವುದು ನಡೆಯುತ್ತದೆ. ಯಾವ ಜ್ಞಾಪಕವಾದರೂ ಮನಸ್ಸಿನಿಂದಲೆ ಬರಬೇಕು. ಆದ್ದರಿಂದ ಜ್ಞಾಪಕಗಳ ಹುತ್ತ ಎಂದಿದ್ದಾರೆ. ಈ ವಿಧವಾಗಿ ಶರೀರದಲ್ಲಿನ ಯಾವ ಪ್ರಕೃತಿ ಭಾಗವೂ ಮಾಡದ ವಿಧದಲ್ಲಿ ಎರಡು ಕೆಲಸಗಳನ್ನು ಮನಸ್ಸು ಮಾಡುತ್ತಿದೆ. ಒಬ್ಬ ವ್ಯಕ್ತಿ ಹಾವನ್ನು ಕಣ್ಣಿನಿಂದ ನೋಡುತ್ತಿದ್ದಾನೆ. ಶರೀರದಲ್ಲಿನ ಕಣ್ಣು ಕೇವಲ ದೃಶ್ಯಗಳನ್ನು ತೋರಿಸುವ ಕೆಲಸವನ್ನು ಮಾತ್ರ ಮಾಡುತ್ತದೆ. ದೃಶ್ಯವನ್ನು ತೋರಿಸುವ ಕೆಲಸವನ್ನು ಕಣ್ಣು ಅಲ್ಲದೆ ಶರೀರದಲ್ಲಿ ಯಾವ ಇತರೆ ಭಾಗವು ಮಾಡುವುದಿಲ್ಲ. ಆದ್ದರಿಂದ ಪ್ರತ್ಯೇಕವಾದ ಕೆಲಸ ಮಾಡುವುದನ್ನು ಪ್ರತ್ಯೇಕ ಭಾಗವಾಗಿ ಗುರುತಿಸಬಹುದು ಎನ್ನುವ ಸೂತ್ರದ ಪ್ರಕಾರ ಶರೀರದಲ್ಲಿ ದೃಶ್ಯಗಳನ್ನು ತೋರಿಸುವ ಕೆಲಸವನ್ನು ಅನುಸರಿಸಿ ಕಣ್ಣನ್ನು ಒಂದು ಭಾಗವಾಗಿ ಗುರುತಿಸುತ್ತಿದ್ದೇವೆ. ಹಾಗೆ ಪ್ರತ್ಯೇಕವಾದ ಕೆಲಸವನ್ನು ಮಾಡುವ ಕಣ್ಣು ತನ್ನಿಂದ ಹೊರಗಿರುವ ಹಾವಿನ ದೃಶ್ಯವನ್ನು ನೋಡಿದೆ. ಹಾಗೆ ನೋಡಿದ ನಂತರ ಕಣ್ಣಿನಿಂದ ನೋಟ ಎನ್ನುವ ವಿಷಯಜ್ಞಾನ ಏರ್ಪಟ್ಟಿದೆ. ಹಾಗೆ ಕಣ್ಣಿನಿಂದ ಏರ್ಪಟ್ಟ ವಿಷಯಜ್ಞಾನವನ್ನು ಶರೀರದಲ್ಲಿ ಎಲ್ಲಾಕಡೆ ವ್ಯಾಪಿಸಿರುವ ಮನಸ್ಸು, ಕಣ್ಣಿನ ವರೆಗು ಸಹ ಇರುವ ಮನಸ್ಸು ಆ ವಿಷಯ ಜ್ಞಾನವನ್ನು ಸ್ವೀಕರಿಸಿ, ಶರೀರ ಒಳಗಿರುವ ಬುದ್ಧಿಗೆ ಆ ವಿಷಯವನ್ನು ಒದಗಿಸುತ್ತದೆ. ಮನಸ್ಸು ಒದಗಿಸಿರುವ ವಿಷಯವನ್ನು ಬುದ್ಧಿ ಗ್ರಹಿಸಿ ಅಲ್ಲಿಯೇ ಇರುವ ಜೀವಿಗೆ ತಿಳಿಸಿದಾಗ ಜೀವಿಯು ತಿಳಿದುಕೊಳ್ಳುತ್ತಿದ್ದಾನೆ. ಜೀವಾತ್ಮನಿಗೆ ವಿಷಯ ತಿಳಿದ ತಕ್ಷಣವೆ ಅಲ್ಲಿಯೇ ಇರುವ ಗುಣಗಳು ಆ ವಿಷಯಕ್ಕೆ ಸ್ಪಂಧಿಸಿದಾಗ, ಆ ಸ್ಪಂದನವನ್ನು ಅಲ್ಲಿಯೇ ಇರುವ ಚಿತ್ತವು ಗ್ರಹಿಸುತ್ತದೆ. ಚಿತ್ತವು ಪ್ರಾರಬ್ಧಕರ್ಮ ಪ್ರಕಾರ ಆ ಸ್ಪಂದನವನ್ನು ವಿಶ್ಲೇಷಿಸಿ ನೋಡಿದಾಗ ಅಲ್ಲಿ ಕರ್ಮ ಪ್ರಕಾರ ಚಿತ್ತ ಒಂದು ನಿರ್ಣಯಕ್ಕೆ ಬಂದು ಆ ನಿರ್ಣಯವನ್ನು ಬುದ್ಧಿಗೆ ತಿಳಿಸುವುದು. ಚಿತ್ತವು ಪಕ್ಕದಲ್ಲೆ ಇರುವ ಬುದ್ಧಿ ಅದನ್ನು ಗ್ರಹಿಸಿ ವಾರ್ತಾಹರನಾದ ಮನಸ್ಸಿಗೆ ತಿಳಿಸುತ್ತದೆ. ಮನಸ್ಸು ಬುದ್ಧಿ ಒದಗಿಸಿದ ವಾರ್ತೆಯನ್ನು ತೆಗೆದುಕೊಂಡು ಹೊರಗೆ ಇಂದ್ರಿಯಗಳಾದ ಕರ್ಮೇಂದ್ರಿಯಗಳಿಗೆ

ತಿಳಿಸುವುದು. ಆಗ ಮನಸ್ಸು ಹೇಳಿದ ವಾರ್ತೆ ಪ್ರಕಾರ ಕರ್ಮೇಂದ್ರಿಯಗಳು ಕೆಲಸ ಮಾಡುತ್ತವೆ.

ಹಾವಿನ ದೃಶ್ಯ ಕಣ್ಣಿನಿಂದ ಕಾಣಿಸಿದಾಗ, ನೋಟ ಎನ್ನುವ ತನ್ಮಾತ್ರ ಅದನ್ನು ಒಂದು ಹೊರಗಿನ ಸಮಾಚಾರವಾಗಿ ತೆಗೆದುಕೊಂಡು ಮನಸ್ಸಿಗೆ ಒದಗಿಸಿದಾಗ, ಮನಸ್ಸು ಒಳಗಿನ ಇಂದ್ರಿಯಗಳಿಗೆ, ಹೊರಗಿನ ಇಂದ್ರಿಯಗಳಿಗೆ ಮಧ್ಯವರ್ತಿಯಾಗಿ ಕೆಲಸಮಾಡಿ, ಹೊರಗಿನ ವಿಷಯ ಒಳಗಿನ ಬುದ್ಧಿಗೆ, ಒಳಗಿನ ಬುದ್ಧಿ ಒದಗಿಸಿದ ಸಮಾಚಾರವನ್ನು ಹೊರಗಿನ ಕರ್ಮೇಂದ್ರಿಯಗಳಿಗೆ ತಿಳಿಸುತ್ತದೆ. ಒಳಗೆ ಹೋಗಿರುವ ಹಾವಿನ ವಿಷಯವನ್ನು ಬುದ್ಧಿ ಜೀವಿಗೆ ತಿಳಿಸಿದಾಗ, ಜೀವಾತ್ಮನ ಸುತ್ತ ನಿವಾಸವಾದ ಗುಣಗಳು ಕದಲಿದಾಗ, ಗುಣಗಳ ಕದಲಿಕೆಯನ್ನು ಚಿತ್ತದ ಕರ್ಮಪ್ರಕಾರ ನೋಡಿ ಕರ್ಮ ನಿರ್ಣಯಕ್ಕೆ ಬಂದದ್ದನ್ನು ಸಮಾಚಾರವಾಗಿ ಬದಲಾಯಿಸಿ ಬುದ್ಧಿಗೆ ತಿಳಿಸಿದೆ. ಹಾವು ಎನ್ನುವ ವಿಷಯವು ಈ ವಿಧವಾಗಿ ಪ್ರಯಾಣಿಸಿ, ಕೊನೆಗೆ ಚಿತ್ತದ ಹತ್ತಿರ ಹಾವನ್ನು ಸಾಯಿಸಿಹಾಕೆನ್ನುವ ಸಮಾಚಾರ ತಯಾರಾಗಿ ಮನಸ್ಸಿಗೆ ಒದಗಿಸಿದಾಗ, ಅದೇ ವಿಷಯವನ್ನು ಮನಸ್ಸು ಬಾಹ್ಯ ಕರ್ಮೇಂದ್ರಿಯಗಳಿಗೆ ತಿಳಿಸಿದೆ. ಆಗ ಕರ್ಮೇಂದ್ರಿಯಗಳಾದ ಕಾಲುಗಳು, ಕೈಗಳು ಚಲಿಸಿ ಕೆಲಸ ಮಾಡಿ ಹಾವನ್ನು ಸಾಯಿಸಿ ಹಾಕಿವೆ. ನಮ್ಮ ಜೀವನದಲ್ಲಿ ನಡೆಯುವ ಪ್ರತಿ ಕೆಲಸ ಇದೇ ವಿಧವಾಗಿ ಪ್ರಯಾಣಿಸಿ ಸಮಾಚಾರವಾಗಿ ಹೊರಗೆ ಬಂದಾಗ, ಅದೇ ನಡೆಯುತ್ತದೆ. ಈ ವಿಧವಾಗಿ ಒಂದು ಸಮಾಚಾರವು ಹೊರಗಿನಿಂದ ಒಳಗೆ ಹೋಗಿ, ಒಳಗಿನಿಂದ ಹೊರಗೆ ಬಂದು ಕೆಲಸ ನಡೆಯುವುದರಲ್ಲಿ ಶರೀರದಲ್ಲಿನ ಒಟ್ಟು 26 ಭಾಗಗಳು ಕೆಲಸ ಮಾಡುತ್ತಿವೆ. ಆದರೆ ಶರೀರದಲ್ಲಿ 27ನೇ ಭಾಗವಾಗಿರುವ ಪರಮಾತ್ಮ ಯಾವ ಕೆಲಸ ಮಾಡದೆ ಇದೆ. ಶರೀರದಲ್ಲಿ ಕೆಲಸ ಮಾಡುವ ಒಟ್ಟು 26 ಭಾಗಗಳಲ್ಲಿ ಮುಖ್ಯವಾದವುಗಳು ಪ್ರತ್ಯೇಕತೆ ಹೊಂದಿರುವವು ಎರಡೆ ಎರಡು ಇವೆ. ಅವು ಒಂದು ಮನಸ್ಸು ಒಂದು ಆತ್ಮ.

ಮನಸ್ಸು ಪ್ರಕೃತಿ ಭಾಗವಾಗಿದ್ದು, ಆತ್ಮ ಪರಮಾತ್ಮನ ಭಾಗವಾಗಿದೆ. ಶರೀರದಲ್ಲಿನ ಜೀವಾತ್ಮನ ಜೊತೆ 24 ಭಾಗಗಳು ಒಂದೊಂದು ಒಂದೊಂದು ಜಾಗದಲ್ಲಿದ್ದು, ಪ್ರತ್ಯೇಕಿಸಿ ಮನಸ್ಸು, ಆತ್ಮ ಎರಡು ಮಾತ್ರ ಶರೀರವೆಲ್ಲ ವ್ಯಾಪಿಸಿವೆ. ಶರೀರವೆಲ್ಲಾ ವ್ಯಾಪಿಸಿರುವ ಮನಸ್ಸು ಶರೀರದ ಹೋರಗಿರುವ ಜ್ಞಾನೇಂದ್ರಿಯ ವಿಷಯಗಳೆಲ್ಲವನ್ನು ಶೇಖರಿಸಿಕೊಳ್ಳುತ್ತಿದೆ, ಒಳಕ್ಕೆ ತಿಳಿಸುತ್ತಿದೆ. ಒಟ್ಟಾರೆ ಬಾಹ್ಯರಂಗಕ್ಕು, ಅಂತಃರಂಗಕ್ಕು ಮನಸ್ಸು ಮಧ್ಯವರ್ತಿಯಾಗಿ ಇರುವುದೆ ಅಲ್ಲದೆ, ಮನಸ್ಸು ವಿಷಯ ಜ್ಞಾಪಕಗಳ ಪೆಟ್ಟಿಗೆಯಾಗಿ ಇದೆಯೆಂದು ಹೇಳಿಕೊಂಡಿದ್ದೇವೆ. ಶರೀರದಲ್ಲಿ ಶರೀರವೆಲ್ಲಾ ವ್ಯಾಪಿಸಿದ ಮನಸ್ಸಿನ ಎರಡು ಕೆಲಸಗಳನ್ನು ತಿಳಿದುಕೊಂಡಿರುವ ನಾವು, ಈಗ ಶರೀರವೆಲ್ಲಾ ವ್ಯಾಪಿಸಿದ ಆತ್ಮ ಹೇಗೆ ಎರಡು ಕೆಲಸಗಳನ್ನು ಮಾಡುತ್ತಿದೆಯೊ ತಿಳಿದುಕೊಳ್ಳೋಣ. ಶರೀರದಲ್ಲಿ ಕೆಲಸ ಮಾಡುವ ಪ್ರಕೃತಿ ಭಾಗಗಳು 24 ಇರುವಾಗ, ಪರಮಾತ್ಮನ ಭಾಗಗಳು ಕೇವಲ ಎರಡೆ ಇವೆ. ಪರಮಾತ್ಮ ಭಾಗಗಳಾದ ಜೀವಾತ್ಮ, ಆತ್ಮಗಳಲ್ಲಿ ಜೀವಾತ್ಮ ಒಂದು ಕಡೆ ಶರೀರದಲ್ಲಿ ಇರುವಾಗ, ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಈಗ ಶರೀರವೆಲ್ಲಾ ವ್ಯಾಪಿಸಿದ ಆತ್ಮವನ್ನು ಕುರಿತು ಪೂರ್ತಿ ವಿವರವಾಗಿ ತಿಳಿದುಕೊಳ್ಳೋಣ.

ಆತ್ಮ ಎನ್ನುವುದು ಶರೀರವನ್ನು ಆವರಿಸಿ ಇರುತ್ತದೆ. ಶರೀರಗಳಲ್ಲಿ ಜೀವಿಯು ನಿವಾಸಿಸುತ್ತಾ ಇರುತ್ತಾನೆ. ಜೀವಾತ್ಮನು ಎಲ್ಲಿ ಇರುತ್ತಾನೋ ಆತ್ಮ ಸಹ ಅಲ್ಲಿ ಇರಲೇಬೇಕು. **ಆತ್ಮವಿಲ್ಲದ ಜಾಗದಲ್ಲಿ ಜೀವಾತ್ಮವಾಗಲಿ, ಜೀವಾತ್ಮ ಇಲ್ಲದ ಜಾಗದಲ್ಲಿ ಆತ್ಮ ಇರುವುದಕ್ಕೆ ಅವಕಾಶವಿಲ್ಲ**. ಇದರಿಂದ ಆತ್ಮ, ಜೀವಾತ್ಮಗಳು ಎರಡೂ ಜೋಡು ಆತ್ಮಗಳಾಗಿ ಇವೆಯೆಂದು ಹೇಳಬಹುದು. ಜೀವಾತ್ಮ, ಆತ್ಮ ಇಲ್ಲದ ಜಾಗದಲ್ಲಿಯೂ ಸಹ ಪರಮಾತ್ಮ ಇದೆ. ಆದರೆ ಜೀವಾತ್ಮ, ಆತ್ಮ ಎರಡು ಆತ್ಮಗಳು ಎಲ್ಲಿದ್ದರೂ ಪರಮಾತ್ಮ ಅಲ್ಲಿಯೂ ಸಹ ಇದೆ. ಜೀವಾತ್ಮನು, ಆತ್ಮನು ಎಂದಿಗೂ ಬೇರೆಬೇರೆಯಾಗಿ ಇದ್ದ ಹಾಗೆ ಹೇಳುವುದಕ್ಕೆ ಅವಕಾಶವಿಲ್ಲ. ಇವು ಎರಡು ಅವಿನಾಭಾವ ಸಂಬಂಧವಿರುವ ಆತ್ಮಗಳು. ಜೀವಾತ್ಮ ಆತ್ಮ ಜೊತೆಯಾಗಿದ್ದು ಎರಡು ವಿಧಗಳ ಶರೀರಗಳಲ್ಲಿ ನಿವಾಸಿಸುತ್ತಾ ಇವೆ.

1) ರಕ್ತವಿರುವ ಶರೀರದಲ್ಲಿಯೂ, 2) ರಕ್ತವಿಲ್ಲದ ಶರೀರಗಳಲ್ಲಿಯೂ ಜೀವಾತ್ಮ ಆತ್ಮಗಳಿವೆ. ರಕ್ತ ಪ್ರಸರಣೆ ಇರುವ ಶರೀರಗಳು ಮನುಷ್ಯರು, ಜಂತುಗಳು, ಪಕ್ಷಿಗಳು ಮೊದಲಾದ ಅಂಡಜ, ಪಿಂಡಜಗಳಾಗಿ ಇವೆ. ರಕ್ತ ಪ್ರಸರಣೆ ಇಲ್ಲದ ಶರೀರಗಳು ಉದ್ಭಿಜಗಳಾದ ಗಿಡ, ಮರ ಬಳ್ಳಿಗಳು ಮೊದಲಾದವುಗಳು ಇವೆ. ವೃಕ್ಷ ಜಾತಿಯಲ್ಲಿಯು ಸಹ ಜೀವಾತ್ಮ, ಆತ್ಮ ಎರಡು ನಿವಾಸಿಸುತ್ತವೆ. ಗಿಡ ಸಹ ಜೀವಿಯು ನಿವಾಸಿಸುವುದಕ್ಕೆ ಯೋಗ್ಯವಾದ ಒಂದು ವಿಧದ ಶರೀರವೆಂದು ಹೇಳಬಹುದು. ರಕ್ತ ಪ್ರಸರಣ ಇರುವ ಮನುಷ್ಯ ಅಥವಾ ಪ್ರಾಣಿಗಳಲ್ಲಾಗಲಿ, ರಕ್ತ ಪ್ರಸರಣವಿಲ್ಲದ ಗಿಡದಲ್ಲಾಗಲಿ ಜೀವಾತ್ಮ ಒಂದು ಜಾಗದಲ್ಲಿರುತ್ತದೆ. ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಮನುಷ್ಯನ ಶರೀರದಲ್ಲಿ ನಖ ಶಿಖ ಪರ್ಯಂತರವು ಆತ್ಮ ವ್ಯಾಪಿಸಿ ಇದ್ದಹಾಗೆ, ಒಂದು ಗಿಡದಲ್ಲಿ ಸಹ ಕೆಳಗಿನ ಬೇರಿನಿಂದ ಮೇಲಿನ ಕೊಂಬೆಯ ತುದಿವರೆಗೂ ಆತ್ಮ ವ್ಯಾಪಿಸಿ ಇದೆ. ರಕ್ತವಿರುವ ಮನುಷ್ಯನಲ್ಲಿ ಶರೀರದಲ್ಲಿ ವ್ಯಾಪಿಸಿದ ಶಕ್ತಿಯನ್ನು ಆತ್ಮ ಎನ್ನುತ್ತಿದ್ದೇವೆ. ಗಿಡದಲ್ಲಿ ಬೇರಿನಿಂದ ಕೊಂಬೆಗಳ ವರೆಗೂ ವ್ಯಾಪಿಸಿದ ಶಕ್ತಿಯನ್ನು ಪೂರ್ವದಲ್ಲಿ **ಎಲೆ** ಎನ್ನುತ್ತಿದ್ದರು ಎಲೆ ಎನ್ನುವ ಪದವನ್ನು ಅನುಸರಿಸಿ ಆತ್ಮಶಕ್ತಿ ಗಿಡದಲ್ಲಿ ಇದೆಯೆಂದು ಎಲ್ಲರಿಗೂ ತಿಳಿಯುವ ಹಾಗೆ ಗಿಡದವೊಂದು ಪತ್ರಗಳನ್ನು ಎಲೆಗಳು ಎಂದಿದ್ದಾರೆ. ಎಲೆಗಳಿರುವ ಗಿಡದಲ್ಲಿ ಆತ್ಮಶಕ್ತಿ ಇದೆಯೆಂದು ಅದೇ ಔಷದ ಶಕ್ತಿ ಎಂದು ಸಹ ಕೆಲವರು ಹೇಳಿದ್ದಾರೆ. ಎಲೆ ಎನ್ನುವ ಪದ ಕಾಲಕ್ರಮದಲ್ಲಿ ಬದಲಾಗಿ ಹೋಗಿದೆ. ಮನುಷ್ಯ ಶರೀರದೊಳಗೆ ಬಂದಿರುವುದರಿಂದ ಈ ದಿನ ಅದು ಆತ್ಮ ಎಂದು ಕರೆಯಲ್ಪಡುತ್ತದೆ. **'ಎಲೆ'(ಆಕು) ಎನ್ನುವ ಶಬ್ದ ಬದಲಾಗುತ್ತಾ ಹೋಗಿ ಎಲೆ(ಆಕು)ಯಿಂದ ಆತ್ಮವಾಗಿ ಬದಲಾಗಿ ಹೋಗಿದೆ. 'ಎ'(ಆ)** ಎನ್ನುವ ಅಕ್ಷರ ಹಾಗೆ ನಿಂತು ಹೋಗಿ **'ಲೆ'(ಕು)** ಅನ್ನುವ ಶಬ್ದ ಕೆಲವರಲ್ಲಿ **'ತ್ಮ'** ಎನ್ನುವ ಶಬ್ದವಾಗಿ ಕರೆಯಲ್ಪಟ್ಟಿದೆ. ಕೊನೆಗೆ ಅದು ಎಲೆ (ಆಕು) ಯಿಂದ ಆತ್ಮವಾಗಿ ಬದಲಾಗಿ ಕರೆಯಲ್ಪಡುತ್ತಿದೆ. ಈಗ ಆತ್ಮ ಶಬ್ದ ಸ್ಥಿರಸ್ಥಾಯಿಯಾಗಿ ನಿಂತುಹೋಗಿದೆ. ಎಲೆ (ಆಕು) ಎಂದರೂ, ಆತ್ಮ ಎಂದರೂ ಒಂದೇ ಅರ್ಥ ಬರುವ ಪದಗಳೆಂದು ತಿಳಿದುಕೊಂಡಾಗ ಆಧ್ಯಾತ್ಮಿಕ ಚೆನ್ನಾಗಿ ಅರ್ಥವಾಗುತ್ತದೆ.

ಗಿಡದಿಂದ ಎಲೆಯಾಗಿ ಆರಂಭವಾದ ಶಕ್ತಿ, ಮನುಷ್ಯನ ಶರೀರದಲ್ಲಿ ಆತ್ಮವೆಂದು ಗುರುತಿಸಲ್ಪಟ್ಟಿದೆ. ಗಿಡದಲ್ಲಿನ ಎಲೆಗೆ ಮೂಲಿಕೆ ಶಕ್ತಿ ಇದ್ದಹಾಗೆ ಹೇಳುತ್ತಿದ್ದೇವೆ. ಎಲೆಗೆ ಮೂಲಿಕಾಶಕ್ತಿ, ಔಷದಿಶಕ್ತಿ ಇದೆಯೆನ್ನುತ್ತಿದ್ದೇವೆ. ಎಲೆಯಲ್ಲಿ ಔಷಧಿ ಶಕ್ತಿ ಇದ್ದಹಾಗೆ ನಿರೂಪಣೆಗೂ ಸಹ ಬಂದಿದೆ. ಆ ಮಾತನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಔಷಧಿ ಎನ್ನುವ ಶಕ್ತಿ ಕೊನೆಗೆ ಮನುಷ್ಯನಲ್ಲಿನ ಓಂಕಾರ ಶಕ್ತಿಯಾಗಿ ಬದಲಾಗಿದೆ. ಇದರಿಂದ ಗಿಡದಲ್ಲಿನ ಔಷಧಿ ಶಕ್ತಿಯೇ ಮನುಷ್ಯನಲ್ಲಿನ ಓಂಕಾರ ಶಕ್ತಿ ಎಂದು ತಿಳಿಯಬೇಕು. ಹಾಗೆ ಗಿಡದಲ್ಲಿನ ಮೂಲಿಕೆ ಶಕ್ತಿಯೆ ಮನುಷ್ಯನಲ್ಲಿನ ಮೂಲ ಶಕ್ತಿಯೆಂದು ತಿಳಿಯಬೇಕು. ಹಾಗೆ ಗಿಡದಲ್ಲಿನ ಎಲೆ ಶಕ್ತಿಯೇ ಮನುಷ್ಯನಲ್ಲಿನ ಆತ್ಮಶಕ್ತಿಯೆಂದು ಅರ್ಥ ಮಾಡಿಕೊಳ್ಳಬೇಕು. ಗಿಡದಲ್ಲಿ ಆತ್ಮ ಇಲ್ಲವೆ ಎಲೆ ಹೇಗೆ ವ್ಯಾಪಿಸಿದೆಯೋ ಹಾಗೆ ಮನುಷ್ಯನಲ್ಲಿ ಆತ್ಮಶಕ್ತಿ ವ್ಯಾಪಿಸಿದೆ. ಗಿಡದಲ್ಲಿಯು, ಮನುಷ್ಯನಲ್ಲಿಯು ಆತ್ಮ ವ್ಯಾಪಿಸಿದ್ದರೂ ಗಿಡ ನಿರ್ಮಾಣಕ್ಕು, ಮನುಷ್ಯನ ಶರೀರ ನಿರ್ಮಾಣಕ್ಕು ಎಷ್ಟೋ ವ್ಯತ್ಯಾಸವಿದೆ. ಗಿಡಕ್ಕೆ ಜ್ಞಾನೇಂದ್ರಿಯಗಳಾಗಲಿ, ಕರ್ಮೇಂದ್ರಿಯಗಳಾಗಲಿ ನಮಗಿದ್ದ ಹಾಗೆ ಇಲ್ಲ. ಗಿಡದ ಶರೀರ ಭಾಗಗಳು ಎಷ್ಟು ಇವೆಯೆಂದು ಹೇಳುವುದಕ್ಕೂ ಸಹ ಲೆಕ್ಕ ತಿಳಿದಿಲ್ಲ. ಆದ್ದರಿಂದ ನಮಗೆ ಅರ್ಥವಾಗುವುದಕ್ಕೆ ಮನುಷ್ಯನ ಶರೀರವನ್ನು ತೆಗೆದುಕೊಂಡು ಪರಿಶೀಲಿಸಿ ನೋಡೋಣ.

ಮನುಷ್ಯನ ಶರೀರದಲ್ಲಿ ಆತ್ಮ ಶರೀರವೆಲ್ಲಾ ವ್ಯಾಪಿಸಿರುವುದೇ ಅಲ್ಲದೆ ಎರಡು ಮುಖ್ಯವಾದ ಕೆಲಸಗಳನ್ನು ಮಾಡುತ್ತಿದೆ. ಶರೀರದಲ್ಲಿರುವ ಪರಮಾತ್ಮ ಭಾಗಗಳು ಜೀವಾತ್ಮ, ಆತ್ಮ ಎರಡೇ ಅಲ್ಲದೆ, ಅದರಲ್ಲಿ ಜೀವಾತ್ಮ ಒಂದೇ ಕಡೆ ಇದ್ದೂ, ಒಂದು ಕೆಲಸವನ್ನು ಮಾಡುತ್ತಿದ್ದು, ಆತ್ಮ ಶರೀರವೆಲ್ಲಾ ಇದ್ದೂ ಎರಡು ಕೆಲಸಗಳು ಮಾಡುತ್ತಿದೆ. ಮನುಷ್ಯ ಶರೀರದಲ್ಲಿನ 24 ಪ್ರಕೃತಿ ಭಾಗಗಳನ್ನು ಆತ್ಮ ಕದಲಿಸಿ ಕೆಲಸವನ್ನು ಮಾಡುವುದಕ್ಕೆ ಶಕ್ತಿ ಕೊಟ್ಟು ಅವುಗಳಿಂದ ಶರೀರ ಯಂತ್ರಾಂಗವನ್ನು ನಡೆಸುತ್ತದೆ. ಹಾಗೆ ಶರೀರಕ್ಕೆ ಚೈತನ್ಯವನ್ನು ಕೊಟ್ಟು ಶರೀರ ಭಾಗಗಳನ್ನು ಕೆಲಸ ಮಾಡಿಸಿ ಮನುಷ್ಯನನ್ನು ಜೀವಿಸುವಂತೆ ಮಾಡುತ್ತದೆ.

ಮನುಷ್ಯ ಮಾತನಾಡಬೇಕೆಂದರೆ ಆತ್ಮ ಮಾತನಾಡಿಸುತ್ತದೆ. ಮನುಷ್ಯ ಕೈ ಅಲ್ಲಾಡಿಸಬೇಕೆಂದರೆ ಆತ್ಮವೇ ತನ್ನ ಶಕ್ತಿಯಿಂದ ಅಲ್ಲಾಡಿಸುವಂತೆ ಮಾಡುತ್ತದೆ. ಹಾಗೆಯೇ ಕಣ್ಣಿನರೆಪ್ಪೆ ಮುಚ್ಚಬೇಕೆಂದರೂ, ತೆರೆಯಬೇಕೆಂದರೂ ಆತ್ಮವೇ ಕೆಲಸ ಮಾಡಿಸುತ್ತಿದೆ. ಅದೇ ವಿಧವಾಗಿ ಶರೀರದಲ್ಲಿನ ಗುಂಡಿಗೆ ಬಡಿದುಕೊಳ್ಳಬೇ ಕೆಂದರೂ, ಶ್ವಾಸಕೋಶಗಳು ಕದಲಬೇಕೆಂದರೂ ಅದನ್ನು ಆತ್ಮ ಚೈತನ್ಯವೆ ಮಾಡಿಸುತ್ತಿದೆ. ಒಟ್ಟಿನಲ್ಲಿ ಶರೀರದಲ್ಲಿನ ಪ್ರತಿ ಚಿಕ್ಕ ಕೆಲಸವನ್ನಾಗಲಿ, ಶರೀರದ ಹೊರಗಿನ ಇಂದ್ರಿಯಗಳ ಕೆಲಸವಾಗಲಿ, ಶರೀರದಲ್ಲಿನ ಅವಯವಗಳ ಕೆಲಸವಾಗಲಿ ಆತ್ಮದಿಂದಲೆ ನಡೆಯುತ್ತಿದೆ. ಆತ್ಮ ಕದಲಿಸದೆ ಹೋದರೆ ಶರೀರದಲ್ಲಿನ ಚಲನೆಗಳು ನಿಂತುಹೋಗುತ್ತವೆ. ಶರೀರದಲ್ಲಿ ಜೀವಾತ್ಮ ಇರಬೇ ಕೆಂದರೂ, ಪ್ರಾಣವಿರಬೇಕೆಂದರೂ, ತಿಂದ ಆಹಾರ ಜೀರ್ಣವಾಗಬೇ ಕೆಂದರೂ, ಶರೀರದಲ್ಲಿನ ಪ್ರತಿಯೊಂದನ್ನು ಆತ್ಮವೇ ಮಾಡಿಸುತ್ತದೆ. ಆತ್ಮದಿಂದಲೆ ಎಲ್ಲಾ ನಡೆಯುತ್ತಿವೆ. ಶರೀರವನ್ನು ಒಟ್ಟಾರೆ ತನ್ನ ಆಧೀನದಲ್ಲಿಟ್ಟುಕೊಂಡು ಆತ್ಮ ಶರೀರವನ್ನು ಕರ್ಮ ಪ್ರಕಾರ ಆಡಿಸುತ್ತಿದೆ. ಶರೀರದಲ್ಲಿನ ಒಂದೊಂದು ಭಾಗಕ್ಕೂ ಒಂದೊಂದು ಕೆಲಸ ಇದ್ದು, 24 ಪ್ರಕೃತಿ ಭಾಗಗಳನ್ನು ಕದಲಿಸಿ ಕೆಲಸ ಮಾಡಿಸುವುದೇ ಆತ್ಮಕ್ಕೆ ಕೆಲಸವಾಗಿದೆ.

ಈ ವಿಧವಾಗಿ ಆತ್ಮ ಸಹ ಶರೀರದಲ್ಲಿ ಒಂದು ಕೆಲಸವನ್ನು ಮಾಡುತ್ತಿದೆ. ಆ ವಿಧವಾಗಿ 24 ಗಂಟೆಗಳು ಶರೀರವನ್ನು ಎಲ್ಲವನ್ನು ನಡೆಸುವುದಕ್ಕೆ ಆತ್ಮ ಶರೀರವೆಲ್ಲಾ ವ್ಯಾಪಿಸಿದೆ. ಮನಸ್ಸು ಸಹ ಶರೀರವೆಲ್ಲಾ ವ್ಯಾಪಿಸಿದ್ದರೂ, ಮನಸ್ಸು ನಿದ್ರೆಯಲ್ಲಿ ಶರೀರವೆಲ್ಲಾ ಇಲ್ಲದೆ ಮುದುಡಿಕೊಂಡು ಹೋಗಿ ಬ್ರಹ್ಮನಾಡಿಯಲ್ಲಿ ಸೇರಿಹೋಗುತ್ತಿದೆ. ಮನಸ್ಸು ಎಚ್ಚರವಾಗಿದ್ದಾಗ ಮಾತ್ರ ಶರೀರವೆಲ್ಲಾ ವ್ಯಾಪಿಸಿದ್ದು ನಿದ್ದೆಯಲ್ಲಿ ಮಾತ್ರ ಬ್ರಹ್ಮನಾಡಿಯಲ್ಲಿ ಒಂದುಕಡೆ ಸೇರಿಹೋಗುತ್ತಿದೆ. ಆದರೆ ಆತ್ಮ ಮಾತ್ರ ನಿದ್ರೆಯಲ್ಲೂ, ಎಚ್ಚರದಲ್ಲೂ ಕೆಲಸ ಮಾಡುತ್ತಾ ಎಲ್ಲಾ ವೇಳೆಯಲ್ಲೂ ಶರೀರವೆಲ್ಲಾ ತುಂಬಿ ಇದೆ. ಮನಸ್ಸು ನಿದ್ರೆಯಲ್ಲಿ ಕೆಲಸ ಮಾಡುವುದಿಲ್ಲ. ಆದರೆ ಆತ್ಮ ನಿದ್ರೆಯಲ್ಲೂ, ಎಚ್ಚರದಲ್ಲೂ ಎರಡೂ ಅವಸ್ಥೆಗಳಲ್ಲಿ ಕೆಲಸ ಮಾಡುತ್ತಿದೆ.

ಮನುಷ್ಯ ಹುಟ್ಟಿದ ದಿನದಿಂದ ಆತ್ಮ ಎಡಬಿಡದೆ ಕೆಲಸ ಮಾಡುತ್ತಲೇ ಇದೆ. ಒಂದು ಕ್ಷಣವೂ ಸಹ ಆತ್ಮ ವಿಶ್ರಾಂತಿ ತೆಗೆದುಕೊಂಡಿಲ್ಲ. ಆತ್ಮಕ್ಕೆ ವಿಶ್ರಾಂತಿ ಎನ್ನುವುದು ಎಂದಿಗೂ ಇಲ್ಲ. ಹೀಗೆ ಯಾವಾಗಲೂ ಆತ್ಮ ಕೆಲಸ ಮಾಡುವುದು ಆತ್ಮಕ್ಕೆ ಒಂದು ಕೆಲಸವಾಗಿಯೇ ಲೆಕ್ಕಿಸಲಾಗುತ್ತದೆ. ಅಷ್ಟೇ ಅಲ್ಲದೆ ಆತ್ಮಕ್ಕೆ ಎರಡನೇ ಕೆಲಸವು ಸಹ ಒಂದಿದೆ. ಅದು ಏನೆಂದರೆ! ಮನುಷ್ಯ ಎಚ್ಚರದಲ್ಲಿ ಇರುವಾಗ ಮನಸ್ಸು ಬಾಹ್ಯೇಂದ್ರಿಯಗಳ ವಿಷಯಗಳನ್ನು ಅಂತರೇಂದ್ರಿಯಗಳಿಗೆ ತಿಳಿಸುತ್ತಿರುತ್ತದೆಂದು ಹೇಳಿಕೊಂಡಿದ್ದೇವೆ. ಮನಸ್ಸು ಶರೀರದಲ್ಲಿ ಬ್ರಹ್ಮನಾಡಿಯಲ್ಲಿ ನಿದ್ರಾವಸ್ಥೆಯಲ್ಲಿ ಇರುತ್ತದೆಂದು ಸಹ ಹೇಳಿಕೊಂಡಿದ್ದೇವೆ. ಮನುಷ್ಯ ನಿದ್ರೆ ಹೋಗಿರುವಾಗ ಬಾಹ್ಯೇಂದ್ರಿಯಗಳ ವಿಷಯ ಒಳಗಡೆಗೆ ತಿಳಿಯುವುದಿಲ್ಲ. ನಿದ್ರೆ ಹೋಗಿರುವವರೆಗು ಹೊರಗೆ ಏನು ನಡೆದಿದೆಯೆಂದು ಮನುಷ್ಯನಿಗೆ ತಿಳಿಯದು. ನಿದ್ರೆಯಲ್ಲಿ ಮನಸ್ಸು ಇಂದ್ರಿಯಗಳ ಹತ್ತಿರವಿಲ್ಲ, ಆದ್ದರಿಂದ ಹೊರಗೆ ಇಂದ್ರಿಯಗಳ ವಿಷಯ ಜ್ಞಾನವು ಒಳಗಿನ ಬುದ್ಧಿಗಾಗಲಿ, ಜೀವಿಗಾಗಲಿ ತಿಳಿಯುವುದಿಲ್ಲ.

ಒಬ್ಬ ಮನುಷ್ಯ ನಿದ್ರೆಹೋಗುವಾಗ ಅವನನ್ನು ಮತ್ತೊಬ್ಬ ಮನುಷ್ಯ ಕರೆದಿದ್ದಾನೆಂದುಕೊಳ್ಳೋಣ. ಆಗ ಆ ಶಬ್ದವು ನಿದ್ರೆ ಹೋಗುತ್ತಿರುವವನ ಕಿವಿಯೊಳಗೆ ಹೋಗಿದೆ. ಅಲ್ಲಿ ಅದು ಆಲಿಸುವಿಕೆಯಾಗಿ ಬದಲಾಗಿದೆ. ಆದರೆ ಆ ಕೇಳಿದ ವಿಷಯವನ್ನು ಶೇಖರಿಸಿ ಒಳಗಿರುವ ಬುದ್ದಿಗೆ ತಿಳಿಸುವ ಮಧ್ಯವರ್ತಿಯಾದ ಮನಸ್ಸು ನಿದ್ರೆಯಲ್ಲಿ ಮುಳುಗಿ ಹೋಗಿ ಬ್ರಹ್ಮನಾಡಿಯಲ್ಲಿದೆ. ಆದ್ದರಿಂದ ಬೇರೆ ಮನುಷ್ಯ ಕರೆದ ವಿಷಯ ಒಳಗಡೆ ತೆಗೆದುಕೊಂಡು ಹೋಗುವ ಮನಸ್ಸು ಇಲ್ಲವಾದ್ದರಿಂದ ಆ ಕರೆ ಆ ಜೀವಿಗಾಗಲಿ, ಆತನ ಬುದ್ಧಿಗಾಗಲಿ ತಿಳಿದಿಲ್ಲ. ಅಂತಹ ಸಂದರ್ಭದಲ್ಲಿ ನಿದ್ರೆ ಹೋದವನನ್ನು ಕರೆದರೂ ಅವನು ಎಚ್ಚರವಾಗುವುದಕ್ಕೆ ಅವಕಾಶವಿಲ್ಲ. ಅವನಿಗೆ ಕರೆ ಸೇರಲಿಲ್ಲ, ಆದ್ದರಿಂದ ಅವನು ನಿದ್ರೆಯಿಂದ ಏಳುವುದಿಲ್ಲ. ಆದರೆ ಅದಕ್ಕೆ ವಿರುದ್ಧವಾಗಿ ನಿದ್ರೆ ಹೋಗುವವನನ್ನು ಕರೆಯುತ್ತಲೆ ಅವನು ಏಳುತ್ತಿದ್ದಾನೆ. ಯಾರೋ ತನ್ನನ್ನು ಕರೆದಿದ್ದಾರೆಂಬ

ವಿಷಯ ಒಳಗೆ ಬುದ್ಧಿಗೆ, ಜೀವಿಗೆ ಸೇರುತ್ತಿದೆ. ಮಧ್ಯವರ್ತಿಯಾದ ಮನಸ್ಸು ಇಲ್ಲದಿರುವಾಗ ಕರೆದಿರುವ ವಾರ್ತೆಯನ್ನು ಯಾರು ಒಳಗಡೆ ಸೇರಿಸಿದ್ದಾರೆ? ಎಂದು ಯೋಚಿಸಿದರೆ ವಾಸ್ತವವಾಗಿ ಅದು ಮನಸ್ಸು ಮಾಡಬೇಕಾಗಿರುವ ಕೆಲಸವೇ ಆದರೂ, ಅಲ್ಲಿ ಮನಸ್ಸಿಗೆ ಆ ವಿಷಯ ತಿಳಿದಿಲ್ಲ. ಮನಸ್ಸು ಅಲ್ಲಿ ಇಲ್ಲವೆ ಇಲ್ಲ. ಮನಸ್ಸು ಇಲ್ಲದೆ ಹೋದರೂ ಅತ್ಯವಶ್ಯಕ ಸಮಯಗಳಲ್ಲಿ ಮನಸ್ಸು ಮಾಡುವ ಕೆಲಸಗಳನ್ನು ಆತ್ಮವೇ ಮಾಡುತ್ತಿದೆ. ಆತ್ಮ ಶರೀರವೆಲ್ಲಾ ಎಲ್ಲ ಅವಯವಗಳವರೆಗು ವ್ಯಾಪಿಸಿ ಇರುವುದರಿಂದ ಕಿವಿಯು ಶಬ್ದವನ್ನು ಕೇಳಿ ಆ ಕೇಳುವಿಕೆಯ ಸಮಾಚಾರವನ್ನು ಮನಸ್ಸು ಸೇರಿಸಿದ ಹಾಗೆ ಒಳಗಿನ ಜೀವಿಗೆ, ಬುದ್ಧಿಗೆ ಸೇರಿಸಿದೆ. ಆದ್ದರಿಂದ ಮನಸ್ಸು ಇಲ್ಲದಿದ್ದರು ಮನುಷ್ಯ ಎಚ್ಚರದೊಳಗೆ ಬರುತ್ತಿದ್ದಾನೆ. ಈ ವಿಧವಾಗಿ ಕೆಲವು ಸಮಯಗಳಲ್ಲಿ ಮನಸ್ಸು ತನ್ನ ಕೆಲಸವನ್ನು ಮಾಡದಿರುವಾಗ, ಮನಸ್ಸು ಮಾಡುವ ಕೆಲಸವನ್ನು ಸಹ ಆತ್ಮ ಮಾಡುತ್ತಿದೆ. ಹಾಗೆ ಮಾಡುವುದು ಆತ್ಮದ ಎರಡನೇ ಕೆಲಸವಾಗುತ್ತಿದೆ. ಇಲ್ಲಿ ಮುಖ್ಯವಾಗಿ ಓದುಗರು ಗ್ರಹಿಸಬೇಕಾಗಿರುವ ವಿಷಯವೇನೆಂದರೆ! ಈಗ ಹೇಳಿದ ಆತ್ಮ ಕೆಲಸ ನಾವು ಕಲ್ಪನೆ ಮಾಡಿ ಹೇಳಿರುವುದೆಂದು ತಿಳಿದುಕೊಳ್ಳಬೇಡಿ. ಮಾಯೆ ಪ್ರಭಾವದಿಂದ ಹಾಗೆ ತಿಳಿದುಕೊಳ್ಳುವುದಕ್ಕೆ ಅವಕಾಶವಿದೆ. ಆದ್ದರಿಂದ ಜಾಗ್ರತೆಯಿಂದ ಗ್ರಹಿಸಬೇಕೆಂದು ಹೇಳುತ್ತಿದ್ದೇವೆ. ಆತ್ಮ ಎರಡನೇ ಕೆಲಸ ಪೂರ್ತಿ ಸತ್ಯವಾದದ್ದು ಮತ್ತು ಶಾಸ್ತ್ರಬದ್ಧವಾದದ್ದೆಂದು ತಿಳಿಯಬೇಕು.

ಹೊರಗೆ ಯಾರೋ ಕರೆದಿದ್ದಾರೆನ್ನುವ ವಿಷಯವನ್ನು ಆತ್ಮ ಗ್ರಹಿಸಿ ಒಳಗಿನ ಬುದ್ಧಿಗೆ, ಜೀವಾತ್ಮಕ್ಕೆ ತಿಳಿಸಿದಾಗ, ಆಗ ಮನಸ್ಸು ಬ್ರಹ್ಮನಾಡಿಯನ್ನು ಬಿಟ್ಟು ಶರೀರವೆಲ್ಲಾ ವ್ಯಾಪಿಸಿಕೊಳ್ಳುತ್ತದೆ. ಹಾಗೆ ಮನಸ್ಸು ಹೊರಗಡೆ ಬರುವುದೇ ಮನುಷ್ಯ ಎಚ್ಚರದೊಳಗೆ ಬರುವುದು. **ಶರೀರದಲ್ಲಿ ಮನಸ್ಸಿನವೊಂದು ಕೆಲಸವನ್ನು ಹಾಗೆ ಆತ್ಮದವೊಂದು ಕೆಲಸವನ್ನು ಗುರುತಿಸಿದರೆ ಅರ್ದ ಆಧ್ಯಾತ್ಮಿಕ ಮನುಷ್ಯನಿಗೆ ಅರ್ಥವಾದ ಹಾಗೆ.** ನಿದ್ರೆ ಹೋಗುತ್ತಿರುವ ಮನುಷ್ಯ ತನಗೆ ತಿಳಿಯದೆ ಪಕ್ಕಕ್ಕೆ ತಿರುಗಿ ಮಲಗಿಕೊಳ್ಳುತ್ತಿದ್ದಾನೆ. ನಿದ್ರೆ ಹೋಗುವ ಮನುಷ್ಯ ತನಗೆ ತಿಳಿಯದೇನೇ

ಎದ್ದು ಒಂದು ಕಡೆಯಿಂದ ಹೋಗಿ ಮತ್ತೊಂದು ಕಡೆ ಮಲುಗುತ್ತಿದ್ದಾನೆ. ಇಂತಹ ಕೆಲಸಗಳನ್ನು ಆತ್ಮ ಒಳಗಿನ ಬುದ್ಧಿಗೆ ಸಮಾಚಾರವನ್ನು ಒದಗಿಸದ ಹಾಗೆ ಮಾಡುತ್ತಿದೆ. ಆದ್ದರಿಂದ ನಿದ್ರೆಯಲ್ಲಿ ತಾನು ಏನು ಮಾಡಿರುವುದು ನಿದ್ರೆ ಹೋಗಿರುವವನಿಗೆ ತಿಳಿಯುವುದಿಲ್ಲ. ಮನುಷ್ಯ ನಿದ್ರೆ ಹೋಗುತ್ತಿರುವಾಗ ಹೊರಗಿನ ವಿಷಯಗಳನ್ನು ಆತ್ಮವೇ ಸ್ವೀಕರಿಸಿ ಅವಶ್ಯವಾದರೆ ಒಳಕ್ಕೆ ತಿಳಿಸುತ್ತದೆ. ಅವಶ್ಯ ಇಲ್ಲದೆ ಹೋದರೆ ತಾನೇ ಸರಿಮಾಡುತ್ತಿದೆ. ಉದಾಹರಣೆಗೆ ನಿದ್ರೆ ಹೋಗಿರುವವನಿಗೆ ಬಹಳ ಹೊತ್ತು ಒಂದೇ ಕಡೆ ಮಲಗುವುದರಿಂದ ಕೈ ನೋವು ಬಂದಿದೆ ಎಂದು ಕೊಳ್ಳೋಣ. ಆಗ ಚರ್ಮವು ತಿಳಿಸುವ ನೋವನ್ನು ಆತ್ಮ ಸ್ವೀಕರಿಸಿ ಅದನ್ನು ಒಳಗಡೆ ಕಳುಹಿಸದೆ ತಾನೇ ಪಕ್ಕಕ್ಕೆ ತಿರುಗಿ ಮಲಗುವ ಹಾಗೆ ಮಾಡುತ್ತದೆ. ಈ ವಿಧವಾಗಿ ನಿದ್ರಾವಸ್ಥೆಯಲ್ಲಿ ಯಾರಾದರು ಕರೆದರೆ ಅವಶ್ಯವನ್ನು ಅನುಸರಿಸಿ ಆ ವಿಷಯವನ್ನು ಒಳಗಡೆ ಕಳುಹಿಸುತ್ತದೆ. ಮನಸ್ಸನ್ನು ಎಚ್ಚರಗೊಳಿಸುವ ಹಾಗೆ ಮಾಡುತ್ತದೆ. ಈ ತತಂಗವೆಲ್ಲ ಮಾನವ ಶರೀರದಲ್ಲಿ ನಡೆಯುತ್ತದೆ. ಯಾರಿಗೆ ತಿಳಿದರೂ, ತಿಳಿಯದಿದ್ದರೂ ಮನುಷ್ಯನ ಶರೀರದಲ್ಲಿ ನೂರಕ್ಕೆ ನೂರರಷ್ಟು ಇದೇ ವಿಧದಲ್ಲಿ ನಡೆಯುತ್ತದೆ. ಮನುಷ್ಯ ಹೊರಗಿನ ಪ್ರಪಂಚದಲ್ಲಿ ಯಾವ ಮತಕ್ಕೆ ಸಂಬಂಧಿಸಿದವನಾದರೂ, ಒಳಗೆ ನಡೆಯುವ ಯಂತ್ರಾಂಗದಲ್ಲಿ ಏನು ವ್ಯತ್ಯಾಸ ಇರುವುದಿಲ್ಲ. ಒಬ್ಬ ಮುಸ್ಲಿಮ್‌ನಲ್ಲಾಗಲಿ, ಕ್ರೈಸ್ತರಲ್ಲಾಗಲಿ, ಹಿಂದೂಗಳಲ್ಲಾಗಲಿ ಎಲ್ಲರಲ್ಲು ಜೀವಾತ್ಮ, ಆತ್ಮ, ಮನಸ್ಸು ಮೊದಲಾದ 26 ಶರೀರ ಭಾಗಗಳಿವೆ. ಅವು ಎಲ್ಲರಲ್ಲಿಯು ಒಂದೇ ವಿಧದಲ್ಲಿ ಕೆಲಸ ಮಾಡುತ್ತಿವೆ. ಮುಸ್ಲಿಮ್‌ನ ಕಣ್ಣು ನೋಡಿದರೆ, ಕ್ರೈಸ್ತನ ಕಣ್ಣು ಆಲಿಸುವ ಕೆಲಸವನ್ನು ಮಾಡುವುದಿಲ್ಲ. ಎಲ್ಲಾ ಮತಗಳಲ್ಲಿನ ಮನುಷ್ಯರ ಕಣ್ಣು ಒಂದೇ ಕೆಲಸವನ್ನು ಮಾಡುತ್ತದೆ. ಆದ್ದರಿಂದ **ನಮಗೆ ಮತಗಳ ಭೇದಗಳಿದ್ದರೂ ಆತ್ಮಕ್ಕಾಗಲಿ, ಜೀವಾತ್ಮಕ್ಕಾಗಲಿ, ಉಳಿದ ಶರೀರ ಭಾಗಗಳಿಗಾಗಲಿ ಯಾವ ಮತ ಭೇದಗಳು ಇಲ್ಲ**. ಎಲ್ಲರೊಳಗೂ ಎಲ್ಲಾ ಒಂದೇ ಪದ್ಧತಿಯಂತೆ ಕೆಲಸ ಮಾಡುತ್ತವೆ. ಕರ್ಮವನ್ನನುಸರಿಸಿ ಮನುಷ್ಯನ ಅನುಭವವು ಬೇರೆ ಬೇರೆಯಾಗಿ ಇರಬಹುದು. ಆದರೆ ಶರೀರದಲ್ಲಿ ಅವಯವಗಳ ಕೆಲಸ ಮಾತ್ರ ಒಂದೇ ವಿಧವಾಗಿ ಇರುವುದು.

ಮನುಷ್ಯ ಬದುಕಿರುವಾಗಲೆ ಅಲ್ಲದೆ ಮನುಷ್ಯ ಸತ್ತುಹೋದಾಗಲಾಗಲಿ, ಹಾಗೆ ಮನುಷ್ಯ ಹುಟ್ಟಿದಾಗಲಾಗಲಿ, ಒಬ್ಬ ಮನುಷ್ಯನಲ್ಲಿ ಯಾವ ತತಂಗ ನಡೆಯುತ್ತದೆಯೋ, ಸಮಸ್ತ ಮತಗಳ ಮನುಷ್ಯರಲ್ಲಿಯು ಅದೇ ನಡೆಯುತ್ತದೆ. ಕುಲ ಮತಗಳನ್ನು ಅನುಸರಿಸಿಯಾಗಲಿ, ಬಡವ ಧನಿಕರನ್ನು ಅನುಸರಿಸಿಯಾಗಲಿ ಆತ್ಮ ವಿಷಯದಲ್ಲಿ ವ್ಯತ್ಯಾಸಗಳಿರುವುದಿಲ್ಲ.

ಮನುಷ್ಯ ಅಜ್ಞಾನದಿಂದ ಮತಗಳನ್ನು ಸೃಷ್ಠಿಸಿಕೊಂಡು, ದೇವರು ಶರೀರದಲ್ಲಿ ಜೋಡಿಸಿದ ವಿಧಾನವನ್ನು ಮರೆತುಹೋಗುವುದರಿಂದ, ಸಾವು ಹುಟ್ಟುಗಳ ವಿಷಯದಲ್ಲಿ ಒಂದೊಂದು ಮತವು ಒಂದೊಂದು ವಿಧದಲ್ಲಿ ಹೇಳಿಕೊಳ್ಳುತ್ತಿದೆ. ಎಲ್ಲ ಮತಗಳಲ್ಲಿಯು ದೇವರು ಒಬ್ಬನೇ ಎಂದು ಮೇಲ್ನೋಟಕ್ಕೆ ಹೇಳಿಕೊಂಡರೂ, ಒಳಗಡೆ ಮಾತ್ರ ನಮ್ಮ ದೇವರು ಬೇರೆಯೆಂದು, ನಮ್ಮ ದೇವರು ಹೇಳಿದ ವಿಧಾನ ಬೇರೆಯೆಂದುಕೊಳ್ಳುತ್ತಾರೆ. ದೇವರು ಯಾವ ಮತಸ್ಥನಿಗಾದರು ಒಂದೇ ಜ್ಞಾನವನ್ನು ತಿಳಿಸಿದ್ದಾನೆ ಆದರೆ ಒಂದೊಂದು ಮತಕ್ಕು ಒಂದೊಂದು ಜ್ಞಾನವನ್ನು ಹೇಳಲಿಲ್ಲ. ಸೃಷ್ಠಿ ಆದಿಯಲ್ಲಿ ಹುಟ್ಟಿದ ಇಂದೂ ಮತ (ಹಿಂದೂ ಮತ)ಕ್ಕೆ ಸಂಬಂಧಿಸಿದ ಭಗವದ್ಗೀತೆಯಲ್ಲಿ ದೇವರು ಭಗವಂತನ ಮುಖಾಂತರ "ಹುಟ್ಟಿದವನಿಗೆ ಸಾವು ತಪ್ಪುವುದಿಲ್ಲ, ಸತ್ತವನಿಗೆ ಹುಟ್ಟುವುದು ತಪ್ಪುವುದಿಲ್ಲ" ಎಂದಿದ್ದಾನೆ. ಆ ಮಾತು ಶರೀರವನ್ನು ಧರಿಸಿದ ಮನುಷ್ಯರೆಲ್ಲರಿಗು ವರ್ತಿಸುತ್ತದೆ. ಕೆಲವರಿಗೆ ಅನ್ವಯಿಸಿ ಕೆಲವರಿಗೆ ಅನ್ವಯಿಸುವುದಿಲ್ಲ ಎನ್ನುವುದಕ್ಕೆ ಅವಕಾಶವಿಲ್ಲ. ಶರೀರಗಳ ಹುಟ್ಟಾಗಲಿ, ಜೀವನವಾಗಲಿ, ಮರಣವಾಗಲಿ ಮಾನವರೆಲ್ಲರಿಗು ಒಂದೇ ವಿಧವಾಗಿರುವುದು. ಬೇರೆ ಬೇರೆ ವಿಧಗಳಲ್ಲಿ ಇರುವುದಿಲ್ಲವೆಂದು ಮೊದಲೆ ಹೇಳಿಕೊಂಡಿದ್ದೇವೆ. ಭಗವದ್ಗೀತೆಯಲ್ಲಿ ದೇವರು ಏನು ಹೇಳಿದ್ದಾನೋ, ಅದೇ ಉಳಿದ ಮತಗ್ರಂಥಗಳಲ್ಲಿ ಸಹ ಹೇಳಲಾಗಿದೆ. ಆದರೆ ದೇವರು ಎಲ್ಲಾ ಮತಗಳಲ್ಲಿಯು ಹೇಳಿದ ಒಂದೇ ಜ್ಞಾನ ಮಾಯೆ ಪ್ರಭಾವದಿಂದ ಬೇರೆ ಬೇರೆ ಮತಗಳಲ್ಲಿ ಬೇರೆಬೇರೆ ಬೋಧನೆಯಾಗಿ ಕಾಣಿಸಿದೆ. ಇದು ಮಾಯೆ ಪ್ರಭಾವವೆಂದು ತಿಳಿಯದ ಮನುಷ್ಯ

ದೇವರು ಏಕೆ ಹಾಗೆ ಹೇಳುವನೆಂದು ಸ್ವಲ್ಪವಾದರೂ ಯೋಚಿಸದೆ ಮಾಯೆ ಹೇಳಿದ ಹಾಗೆ ಮಾತನಾಡುತ್ತಿದ್ದಾನೆ.

ಉದಾಹರಣೆಗೆ ಮನುಷ್ಯನ ಜನನ ಮರಣ ಜ್ಞಾನವನ್ನು ಕುರಿತು ನೋಡಿದರೆ, ದೇವರು ಎಲ್ಲ ಮತಗಳಲ್ಲಿಯು ಒಂದೇ ವಿಧದಲ್ಲಿ ಹೇಳಿದ್ದಾನೆನ್ನುವ ವಿಷಯವನ್ನು ಮನುಷ್ಯ ಮರೆತು ಹೋಗಿದ್ದಾನೆ. ಇಂದೂ (ಹಿಂದೂ) ಮತದಲ್ಲಿ ಜನ್ಮಗಳಿವೆಯೆಂದು ಭಗವದ್ಗೀತೆಯಲ್ಲಿ ಹೇಳಿದ್ದರೆ, ಮುಖ್ಯವಾದ ಇಸ್ಲಾಮ್, ಕ್ರೈಸ್ತ ಮತಗಳಲ್ಲಿ ಮರುಜನ್ಮವೆನ್ನುವುದು ಇಲ್ಲವೆ ಇಲ್ಲ ಎಂದು ಹೇಳುತ್ತಿದ್ದಾರೆ. ಎಷ್ಟೋ ತಿಳುವಳಿಕೆ ಇರುವವರು ಸಹ ಜನ್ಮಗಳ ವಿಷಯಗಳ ಕಡೆಗೆ ಹೋಗುವಷ್ಟೊತ್ತಿಗೆ, ಸ್ವಲ್ಪವಾದರು ಯೋಚಿಸದೆ ಕುರುಡಾಗಿ ಮಾತನಾಡುತ್ತಿದ್ದಾರೆ. ಎಷ್ಟೋ ಆತ್ಮಜ್ಞಾನ ಇರುವ ಪ್ರವಕ್ತರು ಹೇಳಿದ ಮಾತುಗಳನ್ನು ಅರ್ಥ ಮಾಡಿಕೊಳ್ಳದೆ ಹೋಗುತ್ತಿದ್ದಾರೆ. ಪ್ರವಕ್ತರು ಹೇಳಿದ ಮಾತುಗಳನ್ನು ಚೆನ್ನಾಗಿ ವಿಶಧೀಕರಿಸಿಕೊಂಡು ಅರ್ಥ ಮಾಡಿಕೊಂಡರೆ ಅವರು ಜನ್ಮಗಳಿವೆಯೆಂದೆ ಹೇಳಿದ್ದಾರೆ ಹೊರತು, ಜನ್ಮಗಳು ಇಲ್ಲವೆಂದು ಹೇಳಲಿಲ್ಲ. ಭೂಮಿ ಮೇಲೆ ಹುಟ್ಟಿದ ಮನುಷ್ಯರೆಲ್ಲರು ಒಂದೇ ಜ್ಞಾನವನ್ನು ತಿಳಿದುಕೊಂಡಿದ್ದಾರೆಂದು ಹೇಳಲಾಗುವುದಿಲ್ಲ. ಕೆಲವರಲ್ಲಿ ದೈವಜ್ಞಾನವಿದೆ. ಕೆಲವರಲ್ಲಿ ದೈವಜ್ಞಾನವೆನ್ನುವ ಹೆಸರಿನಲ್ಲಿ ಮಾಯೆ ಜ್ಞಾನವಿದೆ. ಯಾವುದು ದೈವ ಜ್ಞಾನವೋ, ಯಾವುದು ಮಾಯೆ ಜ್ಞಾನವೋ ಮನುಷ್ಯರು ಗುರುತಿಸದೆ ಇರುವಾಗ, ನನ್ನದು ನಿಜವಾದ ದೈವಜ್ಞಾನವು ಎಂದು ಒಬ್ಬ ಮತಸ್ಥನೆಂದರೆ, ಮತ್ತೊಬ್ಬ ಮತಸ್ಥನು ನಿನ್ನದು ಮಾಯೆಜ್ಞಾನ, ನನಗೆ ತಿಳಿದಿರುವುದೆ ನಿಜವಾದ ದೇವರ ಜ್ಞಾನ ಎನ್ನುತ್ತಾನೆ. ಅವರಿಬ್ಬರ ಮಾತುಗಳು ಕೇಳುವವನಿಗೆ ಯಾರದು ಅಸಲಾದ ದೈವಜ್ಞಾನವೊ ಕೇಳುವವನಿಗೆ ಅರ್ಥವಾಗದೆ ಹೋಗುತ್ತಿದೆ. ಇಂತಹ ಸಂದರ್ಭದಲ್ಲಿ ಅಸಲಾದ ದೈವಜ್ಞಾನ ಯಾವುದೋ, ಯಾವುದು ಸರಿಯಾದ ಜ್ಞಾನ ಅಲ್ಲವೋ ಎಲ್ಲರಿಗೂ (ದೃಷ್ಟಾಂತವಾಗಿ) ವಿವರವಾಗಿ ತಿಳಿಯುವ ಹಾಗೆ ದೇವರು ಮಾಡುತ್ತಿದ್ದಾನೆ. ಅದನ್ನನುಸರಿಸಿ ನೈಜವಾದ ದೈವಜ್ಞಾನವನ್ನು ಗುರುತಿಸಬಹುದು.

ಇಸ್ಲಾಮ್‌ನಲ್ಲಿ ಪುನರ್ಜನ್ಮಗಳು ಇಲ್ಲ ಎಂದು ಬೋಧಿಸಿದ್ದಾರೆ. ಅದನ್ನು ಎಲ್ಲರೂ ಹಾಗೆಯೇ ಹೇಳಿಕೊಳ್ಳುತ್ತಿದ್ದಾರೆ. ಮರುಜನ್ಮಗಳು ಇಲ್ಲ ಎನ್ನುವ ಮಾತು ಪ್ರತಿ ಮುಸ್ಲಿಮ್ ಹೇಳುತ್ತಿದ್ದಾನೆ. ಪ್ರತಿ ಮುಸ್ಲಿಮ್ ತಾವು ಕೇಳಿರುವುದನ್ನು, ಅಥವಾ ತಾವು ತಮ್ಮ ಮತಹಿರಿಯರಿಂದ ತಿಳಿದುಕೊಂಡಿರುವುದನ್ನೆ ಪೂರ್ತಿ ವಿಶ್ವಾಸದಿಂದ ನಂಬಿ, ಜನ್ಮಗಳು ಇಲ್ಲ ಎಂದು ಧೈರ್ಯವಾಗಿ ಹೇಳುತ್ತಿದ್ದಾರೆ. ತಮ್ಮ ಮತ ಹಿರಿಯರು ಹೇಳಿರುವುದನ್ನೇ ಅವರು ಹೇಳುತ್ತಿದ್ದಾರೆ. ಮತಹಿರಿಯರ ಮಾತಿನ ಮೇಲೆ ವಿಶ್ವಾಸದಿಂದ ಅವರ ಮಾತುಗಳನ್ನು ನಂಬಿ ಹೇಳಿರುವುದೆ ಹೊರತು, ಅವರು ನೋಡಿ ಹೇಳಿರುವುದು ಅಲ್ಲ. ಇಲ್ಲಿ ಒಂದು ಸೂತ್ರವನ್ನು ನಾವು ಹೇಳಿಕೊಂಡರೆ ಹೀಗಿದೆ. ನಂಬಿಕೆ ಎನ್ನುವುದು ಸತ್ಯವಲ್ಲ, ಹಾಗೆಂದು ಅಸತ್ಯವೂ ಅಲ್ಲ. ನಂಬಿಕೆ ಸತ್ಯವೂ ಆಗಬಹುದು, ಅಸತ್ಯವೂ ಆಗಬಹುದು. ಮತ ಹಿರಿಯರು ಹೇಳಿದ ಮಾತನ್ನು ಪ್ರತಿ ಮುಸ್ಲಿಮ್ ವಿಶ್ವಾಸಿಸಿ ಜನ್ಮಗಳು ಇಲ್ಲ ಎಂದು ಹೇಳುತ್ತಿದ್ದಾರೆ. ಹಾಗೆ ವಿಶ್ವಾಸಿಸುವುದರಲ್ಲಿ ತಪ್ಪಿಲ್ಲ. ಇಸ್ಲಾಮ್ ಮಾರ್ಗದಲ್ಲಿ ಮುಖ್ಯವಾದದ್ದು ವಿಶ್ವಾಸ. ದೇವರನ್ನು ಪೂರ್ತಿ ವಿಶ್ವಾಸಿಸುವವನೆ ನಿಜವಾದ ಮುಸ್ಲಿಮ್, ಹಾಗೆಯೇ ದೇವರನ್ನು ಪೂರ್ತಿ ನಂಬಿರುವವನೆ ಇಂದೂವೆಂದು ಹೇಳಬಹುದು. **ದೇವರು ಕಾಣಿಸುವವನಲ್ಲ. ಆದ್ದರಿಂದ ದೇವರನ್ನು ನೋಡದೆ ನಂಬಬೇಕು. ಆದರೆ ಮನುಷ್ಯರು ಹೇಳುವ ದೈವಜ್ಞಾನವನ್ನು ಆಲೋಚಿಸಿ ನಂಬಬೇಕು**. ಆಲೋಚಿಸದೆ ನಂಬಿದರೆ ಅದು ಮೂಢನಂಬಿಕೆಯಾಗಿ ಅಸತ್ಯವಾಗುವುದಕ್ಕೆ ಅವಕಾಶವಿದೆ.

ದೇವರ ಮಾತನ್ನು ದೇವಧೂತನಿಂದ ಪ್ರವಕ್ತ ಕೇಳಿ ಅದೇ ವಿಷಯವನ್ನು ಮನುಷ್ಯರಿಗೆ ಹೇಳಿದ್ದಾನೆ. ಪ್ರವಕ್ತ ದೇವರ ಮಾತನ್ನು ಪೂರ್ತಿ ವಿಶ್ವಾಸಿಸಿ ಅದನ್ನು ಆತನು ಜೀರ್ಣಿಸಿಕೊಂಡು ಅದನ್ನೆ ನಮಗೆ ಹೇಳಿದ್ದಾನೆ. ಇಸ್ಲಾಮ್ ಎಂದರೆ ವಿಶ್ವಾಸ. ವಿಶ್ವಾಸ ಎಂದರೆ ಇಸ್ಲಾಮ್ ಎಂದು ಹೇಳಬಹುದು. ದೇವರ ಜ್ಞಾನವನ್ನು ಧೂತನಿಂದ ಕೇಳಿದ ಪ್ರವಕ್ತ, ದೇವರು ತಿಳಿಸಿದ ವಿಷಯವನ್ನೆ ಪ್ರಜೆಗಳಿಗೆ ಹೇಳಿದ್ದಾನೆ. ಪ್ರವಕ್ತ ಹೇಳಿದ ವಿಷಯ ದೇವರು ಹೇಳಿರುವುದು

ಆದ್ದರಿಂದ ನೂರಕ್ಕೆ ನೂರರಷ್ಟು ಸತ್ಯ. ಆದರೆ ಪ್ರವಕ್ತ ಹೇಳಿದ ಸತ್ಯವನ್ನು ಮನುಷ್ಯ ಅರ್ಥ ಮಡಿಕೊಳ್ಳುವುದರಲ್ಲಿ ತಪ್ಪಾಗಿ ಅರ್ಥೈಸಿಕೊಂಡಿದ್ದಾನೆ. ಪ್ರವಕ್ತ ಹೇಳಿದ ದೇವರ ಮಾತನ್ನು ಸೈತಾನ್ (ಮಾಯೆ) ಮನುಷ್ಯನಿಗೆ ಬೇರೆ ವಿಧದಲ್ಲಿ ಅರ್ಥವಾಗುವ ಹಾಗೆ ಮಾಡಿದೆ. ಅಲ್ಲಿಯವರೆಗು ಸತ್ಯವಾಗಿರುವ ದೇವರ ವಾಕ್ಕು ಅಸತ್ಯವಾಗಿ ಪ್ರಚಾರವಾಗಿದೆ. ಕ್ರೈಸ್ತ ಮತದಲ್ಲಿಯು ಸಾತಾನ್ ಪ್ರಭಾವದಿಂದ ಯೇಸು ಪ್ರವಕ್ತ ಹೇಳಿದ ಜ್ಞಾನವನ್ನು ಕ್ರೈಸ್ತರು ಸರಿಯಾಗಿ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ. ಇಸ್ಲಾಮ್‌ನಲ್ಲಿಯು ಕ್ರೈಸ್ತದಲ್ಲಿಯು ಪ್ರವಕ್ತರು ಹೇಳಿದ ದೇವರ ವಾಕ್ಯಗಳನ್ನು ಕೆಲವನ್ನು ಮಾತ್ರ ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ. ಇನ್ನು ಹಿಂದೂ ಮತದಲ್ಲಿ ನೋಡಿದರೆ ಕೃಷ್ಣನು ಹೇಳಿದ ದೈವವಾಕ್ಯಗಳು ಒಂದೂ ಸಹ ಮನುಷ್ಯರು ಅರ್ಥ ಮಾಡಿಕೊಳ್ಳದೆ ಹೋಗಿದ್ದಾರೆ. ಯಜ್ಞಗಳು, ವೇದಾದ್ಯಯನಗಳು, ದಾನಗಳು, ತಪಸ್ಸುಗಳು ದೇವರ ಮಾರ್ಗವಲ್ಲ ಎಂದು ಹೇಳಿದರೂ, ಬಹುದೇವತಾರಾಧನೆಗಳಿಂದ ಸೃಷ್ಠಿಕರ್ತನಾದ ಪರಮಾತ್ಮನನ್ನು ಸೇರಲಾರರೆಂದು ಹೇಳಿದರೂ, ಆ ಮಾತುಗಳನ್ನು ಮನುಷ್ಯರು ಅರ್ಥ ಮಾಡಿಕೊಳ್ಳದೆ, ಮಾಯೆ ಮಾರ್ಗವನ್ನು ಅವಲಂಭಿಸುತ್ತಾ, ಇದೇ ದೇವರ ಮಾರ್ಗ ಎನ್ನುತ್ತಿದ್ದಾರೆ. ಹಿಂದೂ ಮತವೆಲ್ಲಾ ಮಾಯೆಯಲ್ಲಿ ಬಿದ್ದು ಹೋದರೆ ಇಸ್ಲಾಮ್, ಕ್ರೈಸ್ತರು ಜನ್ಮಗಳ ವಿಷಯಗಳಲ್ಲಿ ಮಾತ್ರ ಪ್ರವಕ್ತರು ಹೇಳಿದ ಸೂತ್ರಗಳನ್ನು ಅರ್ಥಮಾಡಿಕೊಳ್ಳದಂತಿದ್ದಾರೆ.

ಉದಾಹರಣೆಗೆ ಪರಿಶುದ್ಧ ಗ್ರಂಥವಾದ ಬೈಬಲ್‌ನಲ್ಲಿ ಯೇಸು ಹೇಳಿದ ಮಾತನ್ನು ತೆಗೆದುಕೊಂಡು ನೋಡೋಣ. ಆತನು ಹೇಳಿದ ಭಾವವು ಈ ದಿನ ಕ್ರೈಸ್ತರಿಗೆ ಎಲ್ಲಿಯವರೆಗೆ ಅರ್ಥವಾಗಿದೆಯೊ ತಿಳಿದುಹೋಗುತ್ತದೆ. ಮತ್ತಯಿ ಸುವಾರ್ತೆ, 12ನೇ ಅಧ್ಯಾಯ, 30,31,32 ವಾಕ್ಯಗಳನ್ನು ಗಮನಿಸೋಣ. 30) "ನನ್ನ ಪಕ್ಷದಲ್ಲಿ ಇದ್ದವನು ನನಗೆ ವಿರೋಧಿ, ನನ್ನೊಂದಿಗೆ ಬೆರೆತು ಒಟ್ಟುಗೂಡಿಸದವನು ಚದುರಿಸುವವನಾಗುತ್ತಾನೆ. 31) ಆದಕಾರಣ ನಾನು ನಿಮ್ಮೊಂದಿಗೆ ಹೇಳುವುದೇನೆಂದರೇ! ಮನುಷ್ಯರು ಮಾಡುವ ಪ್ರತಿಯೊಂದು

ಪಾಪಕ್ಕೂ, ದೂಷಣೆಗೂ ಕ್ಷಮಾಪಣೆ ಇರುತ್ತದೆ, ಆದರೆ ಆತ್ಮ ವಿಷಯವಾದ ಧೂಷಣೆಗೆ ಕ್ಷಮಾಪಣೆಯಿಲ್ಲ. 32) ಮನುಷ್ಯ ಕುಮಾರನಿಗೆ ವಿರೋಧವಾಗಿ ಮಾತನಾಡುವವನಿಗೆ ಪಾಪ ಕ್ಷಮಾಪಣೆ ಇದೆಯಾಗಲಿ, ಪರಿಶುದ್ಧಾತ್ಮನಿಗೆ ವಿರೋಧವಾಗಿ ಮಾತನಾಡುವವನಿಗೆ ಈ ಯುಗದಲ್ಲಾದರೂ ಮುಂಬರುವ ಯುಗದಲ್ಲಾದರೂ ಪಾಪಕ್ಷಮಾಪಣೆ ಇಲ್ಲ.

ಪ್ರವಕ್ತ ಯೇಸು ಪ್ರಭುವು ಹೇಳಿದ ಮಾತುಗಳಲ್ಲಿ 32ನೇ ವಾಕ್ಯದಲ್ಲಿ ಸ್ಪಷ್ಟವಾಗಿ ಒಂದು ವಿಧವಾದ ಪಾಪಗಳನ್ನು ಅನುಭವಿಸುವುದಕ್ಕೆ ಎರಡು ಯುಗಗಳ ಕಾಲ ಬೇಕಾಗುತ್ತದೆಂದು ಹೇಳಲಾಗಿದೆ. ಅದರಲ್ಲಿ ಒಂದು ವಿಧ ಪಾಪಕ್ಕೇ ಎರಡು ಯುಗಗಳಕಾಲ ಮನುಷ್ಯ ಬದುಕಿ ಪಾಪವನ್ನು ಅನುಭವಿಸಬೇಕಾಗಿರುತ್ತದೆ. ಒಂದೇ ಶರೀರದಿಂದ, ಒಂದೇ ಜನ್ಮದಲ್ಲಿ ಯಾವ ಮನುಷ್ಯ ಒಂದು ಯುಗಕಾಲ ಸಹ ಇರಲಾರನು. ಕೆಲವು ಲಕ್ಷಗಳ ಸಂವತ್ಸರಗಳು ಒಂದೊಂದು ಯುಗವು ಇರುವಾಗ, ಎರಡು ಯುಗಗಳೆಂದರೆ ಎಷ್ಟು ಕಾಲವೋ ಅರ್ಥವಾಗುತ್ತದೆ. ಒಂದು ಜನ್ಮದಲ್ಲಿ ಕನಿಷ್ಠ ನೂರು ಸಂವತ್ಸರಗಳು ಸಹ ಬದುಕದ ಮನುಷ್ಯ, ಒಂದೇ ಜನ್ಮದಲ್ಲಿ ಎರಡು ಯುಗಗಳು ಇರಬಲ್ಲನಾ? ಇರುವುದಿಲ್ಲ. ಆತನು ಎಷ್ಟೋ ಸಾವಿರ ಜನ್ಮಗಳು ಎತ್ತಿದರಾಗಲಿ ಎರಡು ಯುಗಗಳು ಮುಗಿದು ಹೋಗುವುದಿಲ್ಲ. ಇದರಿಂದ ದೈವಸಂಬಂಧ ಪಾಪವನ್ನು ಅನುಭವಿಸುವುದಕ್ಕೆ ಮನುಷ್ಯ ಕೆಲವು ಲಕ್ಷ ಜನ್ಮಗಳಾಗಲಿ ಅಥವಾ ಕೆಲವು ಸಾವಿರ ಜನ್ಮಗಳಾಗಲಿ ಹೊಂದಬೇಕಾಗುತ್ತದೆಂದು ಅರ್ಥವಾಗುತ್ತದೆ. ಆದರೆ ಮುಖ್ಯವಾದ ಈ ಮಾತುಗಳು ಅಥವಾ ಮೇಲಿನ ವಾಕ್ಯಗಳು ಕ್ರೈಸ್ತರಿಗಾಗಲಿ, ಕ್ರೈಸ್ತ ಬೋಧಕರಿಗಾ ಗಲಿ ಸಾತಾನ್ ಪ್ರಭಾವದಿಂದ ಅರ್ಥವಾಗಿಲ್ಲವೆಂದು ಹೇಳಬಹುದು. ಪರಿಶುದ್ಧ ಬೈಬಲ್‌ನಲ್ಲಿ ಪ್ರಭು ಮಾತುಗಳಿಂದ ಜನ್ಮಗಳಿವೆಯೆಂದು ಸ್ಪಷ್ಟವಾಗಿ ತಿಳಿಯುತ್ತಿದ್ದರು, ಜನ್ಮಗಳು ಇಲ್ಲವೆಂದು ಕ್ರೈಸ್ತರು ಹೇಳುವುದು ಪ್ರಭು ಮಾತನ್ನು ವಕ್ರೀಕರಿಸಿದಹಾಗೆ ಅಲ್ಲವೆ?

ಸ್ವರ್ಗ ನರಕಗಳೆನ್ನುವ ಮಾತುಗಳೆರಡೆ ಮನುಷ್ಯನನ್ನು ಮಾಯಮಾರ್ಗ ದೊಳಗೆ ತಳ್ಳಿಹಾಕುತ್ತಿವೆ. ಪ್ರತಿ ಮತದಲ್ಲಿಯು ಸ್ವರ್ಗ ನರಕಗಳೆನ್ನುವವು ಇವೆಯೆಂದು ಹೇಳಿಕೊಳ್ಳುತ್ತಿದ್ದಾರೆ. ಆದರೆ ಈ ಎರಡನ್ನು ಯಾರೂ ನೋಡಿಲ್ಲ. ಯಾವ ಮತಸ್ಥನಿಗು ಅವು ಎಲ್ಲಿವೆ, ಎಷ್ಟು ದೂರದಲ್ಲಿವೆಯೆಂದು ತಿಳಿದಿಲ್ಲ. ಸ್ವರ್ಗ ನರಕ ಎನ್ನುವವುಗಳನ್ನು ಎಲ್ಲಾ ಮತಗಳ ಪ್ರವಕ್ತರು ಹೇಳಿದರೂ, ನರಕದಲ್ಲಿ ಬಾಧೆಗಳು, ಸ್ವರ್ಗದಲ್ಲಿ ಸುಖಗಳಿವೆಯೆಂದು ಹೇಳಿದರೂ, ಯಾವುದು ಎಲ್ಲಿದೆ, ನಿನಗೆ ಎಷ್ಟು ದೂರದಲ್ಲಿದೆಯೆಂದು ಹೇಳುವುದಿಲ್ಲ. ಮನುಷ್ಯ ಅವುಗಳ ವಿಷಯದಲ್ಲಿ ಬಹಳ ತಪ್ಪಾಗಿ ತಿಳಿಯುತ್ತಾನೆಂದು ತಿಳಿದಿದ್ದರೆ ಅವರು ಸ್ವರ್ಗ ನರಕಗಳನ್ನು ಕುರಿತು ಇನ್ನು ವಿವರವಾಗಿ ಹೇಳುತ್ತಿದ್ದರು. ಸ್ವರ್ಗ ನರಕಗಳ ಮಾತು ನಿಜ, ಅವು ಇವೆಯೆಂದು ಹೇಳಿದ ಮಾತು ನಿಜ. ಅವು ಇರುವುದು ಸಹ ನಿಜ. ಆದರೆ ಅವು ಎಲ್ಲಿವೆ ಎನ್ನುವ ವಿಷಯದಲ್ಲಿ ಎಲ್ಲಾ ಮತಗಳು ಮಾಯೆಯಲ್ಲಿ ಮುಳುಗಿಹೋಗಿವೆ. ಸ್ವರ್ಗ ನರಕಗಳ ಅವಗಾಹನೆಯಲ್ಲಿ ಬೋಧಕರು ಸಹಿತ ತಪ್ಪಾಗಿ ಅರ್ಥೈಸಿಕೊಂಡಿದ್ದಾರೆ. ಅವರ ಮಾತುಗಳನ್ನು ಕೇಳುವ ಮಾನವರು ಸಹ ಅವರ ಮಾರ್ಗವನ್ನೇ ತಪ್ಪಾಗಿ ತಿಳಿದುಕೊಂಡಿದ್ದಾರೆ. ಪ್ರವಕ್ತರು ಹೇಳಿರುವುದು ಒಂದು ಉದ್ದೇಶವಾದರೆ ನಾವು ಅರ್ಥ ಮಾಡಿ ಕೊಂಡಿರುವುದು ಮತ್ತೊಂದು ಉದ್ದೇಶವಾಗಿದೆ. ಹೀಗೆ ಸ್ವರ್ಗ ನರಕಗಳೆನ್ನುವವು ಒಟ್ಟಿನಲ್ಲಿ ಎಲ್ಲ ಮತಗಳಲ್ಲಿಯು ಅರ್ಥವಾಗದೆ ಹೋಗಿವೆ. ಒಂದು ವಿಷಯದಲ್ಲಿ ದಾರಿ ತಪ್ಪಿ ಹೋದರೆ ಅದರಲ್ಲಿ ಅನುಸಂಧಾನವಾದ ಜ್ಞಾನ ವಿಷಯಗಳೆಲ್ಲ ದಾರಿ ತಪ್ಪಿ ಹೋಗುವವು. ಹಾಗೆ ಜ್ಞಾನ ವಿಷಯಗಳ ಅವಗಾಹನೆಯಲ್ಲಿ ದಾರಿ ತಪ್ಪಿ ಹೋದ ಮನುಷ್ಯರಲ್ಲಿ ಎಲ್ಲದಕ್ಕಿಂತ ಮುಂದಿರುವವರು ಹಿಂದುಗಳು, ನಂತರ ಕ್ರೈಸ್ತವಮತದವರು. ಅದರ ನಂತರ ಇಸ್ಲಾಮ್ ಮತದವರೆಂದು ಹೇಳಬಹುದು. ಇಸ್ಲಾಮ್ ಮತದಲ್ಲಿ ಬಹಳ ಮಟ್ಟಿಗೆ ಪ್ರವಕ್ತ ಹೇಳಿದಹಾಗೆ ಅರ್ಥಮಾಡಿಕೊಂಡರೂ, ಒಂದು ಸ್ವರ್ಗ ನರಕಗಳ ಹತ್ತಿರ ಮಾತ್ರವೇ ತಪ್ಪುದಾರಿ ಹಿಡಿದಿದ್ದಾರೆ.

ಪ್ರವಕ್ತರು ಹೇಳಿದ ಮಾತುಗಳಲ್ಲಿ ಸ್ವರ್ಗ ನರಕಗಳು ಭೂಮಿಮೇಲೆಯೆ ಇವೆಯೆಂದು, ದೇವರು ಪುಣ್ಯ ಮಾಡಿಕೊಂಡವರಿಗೆ ಸ್ವರ್ಗವನ್ನು, ಪಾಪ ಮಾಡಿಕೊಂಡವರಿಗೆ ನರಕವನ್ನು ಇಲ್ಲಿಯೇ ಅನುಭವಿಸುವಂತೆ ಏರ್ಪಾಟು ಮಾಡಿದ್ದಾನೆಂದು, ಅದರ ಪ್ರಕಾರ ಕರ್ಮ ಫಲಗಳನ್ನು ಮನುಷ್ಯ ಭೂಮಿಮೇಲೆಯೆ ಅನುಭವಿಸುತ್ತಾನೆನ್ನುವ ಒಂದು ವಿಷಯವನ್ನು ತಿಳಿದುಕೊಂಡರೆ, ಆಧ್ಯಾತ್ಮಿಕ ರಂಗದಲ್ಲಿರುವ ಎಷ್ಟೋ ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ. ಇಲ್ಲದೆ ಹೋದರೆ ನಮ್ಮ ಜ್ಞಾನವೆಲ್ಲಾ ಸಂಶಯಗಳಿಂದ ಕೂಡಿಕೊಂಡಿರುವುದಾಗಿ, ಸರಿಯಾದ ಉತ್ತರ ಇಲ್ಲದ್ದಾಗಿ ಇರುವುದು. ಆದ್ದರಿಂದ ಒಂದು ಸಲ ಸ್ವರ್ಗ ನರಕಗಳೆಲ್ಲ ಇಲ್ಲಿಯೇ ಭೂಮಿಮೇಲೆ ಇವೆಯೆಂದು, ಅವುಗಳನ್ನು ನಾವು ನಿತ್ಯವು ಅನುಭವಿಸುತ್ತೇವೆಂದು, ಕಣ್ಣೆದುರಿಗಿರುವ ಸ್ವರ್ಗ ನರಕಗಳನ್ನು ಎಲ್ಲರೂ ನೋಡುತ್ತಿದ್ದೇವೆಂದು ಗ್ರಹಿಸಿದರೆ, ನಿಜವಾದ ಜ್ಞಾನ ಮನುಷ್ಯನಿಗೆ ತಿಳಿದುಹೋಗುತ್ತದೆ. ಆದರೆ ಮಾಯೆ ಮಾತ್ರ ಹಾಗೆ ಅರ್ಥವಾಗದ ಹಾಗೆ ಮಾಡುತ್ತಾ, ಈಗ ನಾವು ಹೇಳುತ್ತಿರುವ ಮಾತು ಪೂರ್ತಿ ಅಸತ್ಯವೆಂದು ನಂಬುವ ಹಾಗೆ ಮಾಡಬಲ್ಲದು. ಸ್ವರ್ಗನರಕ ವಿಷಯಗಳಲ್ಲಿ ಮನುಷ್ಯರನ್ನು ಪೂರ್ತಿ ತಪ್ಪುದಾರಿ ಹಿಡಿಸಿದ ಮಾಯೆ ಕೆಲವು ಮತಗಳಲ್ಲಿ ದೈವಸನ್ನಿಧಿಯಾದ ಮೋಕ್ಷವನ್ನು ಅಥವಾ ದೈವದಲ್ಲಿ ಐಕ್ಯವಾಗುವುದನ್ನು ಸ್ವರ್ಗವೆಂದು ಭಾವಿಸುವಂತೆ ಮಾಡಿದೆ. ಸ್ವರ್ಗ ನರಕಗಳು ಬೇರೆಯೆಂದು, ಅವು ಮಾನವನಿಗೆ ಸುಖ ದುಃಖಗಳನ್ನು ಒದಗಿಸುವವೆಂದು, ಮುಕ್ತಿ ಅಥವಾ ಮೋಕ್ಷ ಎನ್ನುವುದು ಬೇರೆಯೆಂದು ಅದು ಸುಖದುಃಖಗಳಿಗೆ ಅತೀತವಾದ ದೈವ ಸನ್ನಿಧಿಯೆಂದು ತಿಳಿಯದ ಮನುಷ್ಯರು ಮೋಕ್ಷವನ್ನು ಸಹ ಸ್ವರ್ಗವೆಂದು ಹೇಳಿಕೊಳ್ಳುತ್ತಿದ್ದಾರೆ. ಮನುಷ್ಯನನ್ನು ಇಷ್ಟು ತಪ್ಪುದಾರಿಗಳು ಹಿಡಿಸಿದ ಮಾಯೆ, ಸಾವು ಹುಟ್ಟುಗಳ ವಿಷಯದಲ್ಲಿ ಪೂರ್ತಿಯಾಗಿ ಆವರಿಸಿಕೊಂಡು ಪುನರ್ಜನ್ಮವೇ ಇಲ್ಲವೆಂದು, ಇರುವುದು ಒಂದೇ ಜನ್ಮ ಎನ್ನುವ ಹಾಗೆ ಮಾಡಿದೆ. ಇಂತಹ ರಹಸ್ಯಗಳು ಮನುಷ್ಯನಿಗೆ ಎಂದಿಗೂ ತಿಳಿಯದಿರುವುದಕ್ಕೆ ಮನುಷ್ಯನ ಆಧ್ಯಾತ್ಮಿಕ ಜ್ಞಾಪಕವೆಲ್ಲಾ ಹೊರಗಿನ ಪ್ರಪಂಚದಲ್ಲಿಯೇ ಲಗ್ನವಾಗುವಂತೆ ಮಾಡಿದೆ. ಶರೀರ ಅಂತರಂಗದಲ್ಲಿ

ಜೀವಿಯಾದ ತಾನು ಬೇರೆಯೆಂದು, ಆತ್ಮ ಬೇರೆಯೆಂದು ಹಾಗೆ ಮನಸ್ಸು, ಬುದ್ಧಿ ಬೇರೆ ಬೇರೆಯಾಗಿ ಕೆಲಸ ಮಾಡುತ್ತಿವೆಯೆಂದು, ಹಾಗೆ ಅಂತರಂಗದಲ್ಲಿ ನಡೆಯುವ ವಿಧಾನವನ್ನು ತಿಳಿದುಕೊಳ್ಳುವುದೆ ನಿಜವಾದ ಆಧ್ಯಾತ್ಮಿಕವೆಂದು ಹಾಗೆ ತಿಳಿದುಕೊಂಡಾಗಲೆ ದೈವದವೊಂದು ಜ್ಞಾನವು, ಅದರ ಧರ್ಮಗಳು ತಿಳಿಯುವವೆಂದು, ಹಾಗೆ ಶರೀರಾಂತರ್ಗತವನ್ನು ತಿಳಿದುಕೊಂಡರೆ, ಎಲ್ಲಾ ಪ್ರಶ್ನೆಗಳಿಗೆ ಸಂಪೂರ್ಣವಾದ ಉತ್ತರಗಳು ಸಿಗುತ್ತವೆಂದು, ಮನುಷ್ಯ ತಿಳಿದುಕೊಳ್ಳದೆ ಹೋಗುವುದರಿಂದ ಮನುಷ್ಯ ಮತ ಎನ್ನುವ ಮತ್ತಲ್ಲಿ ಸಿಲುಕಿಕೊಂಡು, ಮಾಯೆ ಎನ್ನುವುದನ್ನು ಗುರುತಿಸದೆ ತನ್ನನ್ನು ತಾನಾಗಲಿ, ತಾನು ದೈವವನ್ನಾಗಲಿ ಗುರುತಿಸದೆ ಹೋಗುತ್ತಿದ್ದಾನೆ.

ಎಲ್ಲ ಮತಗಳಲ್ಲಿನ ಪ್ರವಕ್ತರು ದೈವವನ್ನು ಕುರಿತು ತಿಳಿಸಿದರೂ, ಅವರು ಹೇಳಿದ ಜ್ಞಾನವನ್ನು ಅರ್ಥಮಾಡಿಕೊಳ್ಳದೆ ಪ್ರವಕ್ತರಿಗು ಸಹ ಮತವನ್ನು ಅಂಟಿಸಿ ನಮ್ಮ ಮತ ಬೇರೆ ಎನ್ನುತ್ತಿದ್ದಾರೆ. ಇಲ್ಲಿಯವರೆಗು ಯಾವ ಪ್ರವಕ್ತ ಹೇಳಿದರೂ ಆ ದೈವ ವಿಷಯವು ವಿಶ್ವ ಮಾನವರಿಗೆ ಎಲ್ಲರಿಗೂ ಅನ್ವಯಿಸುವಂತೆ ಹೇಳಿದ್ದಾರಾಗಲಿ, ಅವರು ಮತ ಎಂದು ಹೆಸರಿಟ್ಟು ಹೇಳಲಿಲ್ಲ. ದೇವರು ಪ್ರವಕ್ತರಿಂದ ತನ್ನ ಜ್ಞಾನವನ್ನು ಹೇಳಿಸಿದರೆ, ಮಾಯೆ ಮನುಷ್ಯರನ್ನು ತನ್ನ ಪಕ್ಷದಲ್ಲಿ ಉಳಿಸಿಕೊಳ್ಳುವುದಕ್ಕೆ, ದೈವದ ಕಡೆ ಯಾರನ್ನು ಹೋಗದಂತೆ ಮಾಡುವುದಕ್ಕೆ, ಬೇರೆ ಬೇರೆ ಕಾಲಗಳಲ್ಲಿ ಹೇಳಿದ ಪ್ರವಕ್ತರು, ಬೇರೆ ಬೇರೆ ಮತಗಳನ್ನು ಬೋಧಿಸಿದ್ದಾರೆಂದು ಅರ್ಥವಾಗುವಂತೆ ಮಾಡಿದೆ. ಮೊದಲು ಈ ವಿಧದಲ್ಲಿ ಆರಂಭವಾದ ಮಾಯೆ ಪ್ರಭಾವ ಮನುಷ್ಯನನ್ನು ಜೀವನವನ್ನೆಲ್ಲಾ ತನ್ನ ಪ್ರಭಾವದಲ್ಲಿಯೆ ಸಿಲುಕಿಕೊಳ್ಳುವಹಾಗೆ ಮಾಡಿದೆ. ಆದ್ದರಿಂದ ಮನುಷ್ಯ ಬಾಹ್ಯವಾಗಿ ಎಷ್ಟು ಮೇಧಾವಿ ಆದರೂ, ಅಂತರಂಗದಲ್ಲಿ ದೇವರ ವಿಷಯದಲ್ಲಿ ಪೂರ್ತಿ ತಿಳುವಳಿಕೆ ಕಡಿಮೆಯಾದವನಾಗಿ ಹೋಗಿದ್ದಾನೆ. ಕೆಲವರು ಆಧ್ಯಾತ್ಮಿಕ ವಿದ್ಯೆಯಲ್ಲಿ ಸಹ ಮೇಧಾವಿಗಳಂತೆ ಕಾಣಿಸಿದರು, ಎಲ್ಲ ಮತಗಳಲ್ಲಿನ ಮೂಲ ಗ್ರಂಥಗಳನ್ನು ಓದಿ ಪ್ರತಿ ಪುಟವನ್ನು ತಮ್ಮ ಜ್ಞಾಪಕದಲ್ಲಿ ಇಟ್ಟುಕೊಂಡರೂ,

ವೇದಗಳಲ್ಲಿನ ಮಂತ್ರವನ್ನು, ಗೀತೆಯಲ್ಲಿನ ಶ್ಲೋಕಗಳನ್ನು, ಪರಿಶುದ್ಧ ಬೈಬಲ್‌ನಲ್ಲಿ ವಾಕ್ಯಗಳನ್ನು, ಪವಿತ್ರ ಖುರಾನ್‌ನಲ್ಲಿನ ಆಯತ್‌ಗಳನ್ನು ಸುಲಭವಾಗಿ ಹೇಳಿದರೂ, ಅಂತಹವರು ಸಹ ಮತಗಳ ಮಾಯೆಯಲ್ಲಿ ಸಿಲುಕಿಕೊಂಡಿದ್ದಾರೆ. ಆದರೆ ಮತಾತೀತವಾದ ದೇವರ ಜ್ಞಾನವನ್ನು ಗುರುತಿಸದೆ ಇದ್ದಾರೆ. ಶರೀರ ಅಂತರಂಗದಲ್ಲಿ ದೇವರು ಸರ್ವರಿಗೂ ಏರ್ಪಡಿಸಿದ ವಿಧಾನವನ್ನು ತಿಳಿದುಕೊಳ್ಳದೆ ಇದ್ದಾರೆ. ತನ್ನನ್ನು ಕುರಿತು ತಾನು ಯಾರು ಎಂದು ನೋಡಿಕೊಳ್ಳದೇ ಹೋಗುತ್ತಿದ್ದಾರೆ. ನಿತ್ಯವು ಮನುಷ್ಯನಲ್ಲಿ ನಡೆಯುವ ತತಂಗವನ್ನು ನಡೆಸುವವನ್ಯಾರೋ ತಿಳಿಯದೆ ಇದ್ದಾರೆ. ಶರೀರದಲ್ಲಿ ತನ್ನ ಪಾತ್ರ ಅಲ್ಪವಾಗಿರು ವುದಾ ಅಥವಾ ದೊಡ್ಡದಾ ಎಂದು ಗುರುತಿಸದೆ ಹೋಗುತ್ತಿದ್ದಾರೆ. ಹಾಗೆ ಒಳಗಿನ ವಿಧಾನ ತಿಳಿಯದಿರುವಾಗ, ಸೃಷ್ಠಿ ನಂತರ ಶರೀರದೊಳಗೆ ನಡೆಯುವ ಸಾವನ್ನು ಕುರಿತಾಗಲಿ, ಸೃಷ್ಠಿ ಆದಿಯಲ್ಲಿ ನಡೆದ ಹುಟ್ಟನ್ನು ಕುರಿತಾಗಲಿ, ತಿಳಿಯದ ಸ್ಥಿತಿಯಲ್ಲಿ ಮನುಷ್ಯ ಇರುವುದರಿಂದ, ಜಗತ್ತಿನಲ್ಲಿ ಇಲ್ಲಿಯವರೆಗು ಪುನರ್ಜನ್ಮ ವಿಷಯ ರಹಸ್ಯವಾಗಿಯೇ ಉಳಿದುಕೊಂಡಿದೆ.

ದೇವರು ತನ್ನ ಜ್ಞಾನವನ್ನು ಮನುಷ್ಯನಿಗೆ ತಿಳಿಸಬೇಕೆಂದು ಎಷ್ಟೋಸಲ ಭೂಮಿಮೇಲೆ ತನ್ನ ಜ್ಞಾನವನ್ನು ಇಂದೂ ಮತದಲ್ಲಿ (ಹಿಂದೂಮತದಲ್ಲಿ) ಭಗವಂತನಿಂದ ಪ್ರಕಟಿಸಿದ್ದಾನೆ. ಹಾಗೆ ಉಳಿದ ಮತಗಳಲ್ಲಿ ಪ್ರವಕ್ತರಿಂದ ತಿಳಿಸಿದ್ದಾನೆ. ಆದರೂ ಮಾಯೆ ಮಾನವನನ್ನು ಆಗಿಂದಾಗ್ಗೆ ದೇವರ ಜ್ಞಾನಕ್ಕೆ ದೂರ ಮಾಡುತ್ತಾ ಹೋಗಿದೆ. ಆದ್ದರಿಂದ ಮನುಷ್ಯ ಮೊದಲು ತನ್ನ ಸಾವು ಹುಟ್ಟುಗಳನ್ನು ಕುರಿತು ತಿಳಿದುಕೊಳ್ಳದೆ ಹೋಗಿದ್ದಾನೆ. ಪ್ರವಕ್ತರಿಂದ ಪುನರ್ಜನ್ಮ ರಹಸ್ಯವನ್ನು ಹೇಳಿಸಿದರೂ, ಮನುಷ್ಯ ಗ್ರಹಿಸದೆ ಹೋಗಿರುವುದರಿಂದ, ಜನ್ಮಗಳ ವಿಷಯ ಅತ್ಯಂತ ಪ್ರಾಮುಖ್ಯವಾದದ್ದಾಗಿರುವುದರಿಂದ, ಮತ್ತೆ ಆ ವಿಷಯವನ್ನು ಮನುಷ್ಯನಿಗೆ ತಿಳಿಸುವ ನಿಮಿತ್ತ, ಮನುಷ್ಯ ಶರೀರದೊಳಗಿನ ಆತ್ಮ ತಾನೇ ಸ್ವತಃವಾಗಿ ತಿಳಿಸಬೇಕೆನ್ನುವ ವಿಧಾನವನ್ನು ಆಯ್ಕೆಮಾಡಿಕೊಂಡಿದೆ. ಆತ್ಮ ತಾನೇ ಸ್ವತಃವಾಗಿ ಪುನರ್ಜನ್ಮಗಳ ವಿಷಯವನ್ನು ಜೀವಾತ್ಮರಾದ ಮನುಷ್ಯರಿಗೆ

ತಿಳಿಸುವುದಕ್ಕು ಒಂದು ಕಾರಣ ಇದೆ. ಪರಮಾತ್ಮ ಕೆಲಸ ಮಾಡುವುದಿಲ್ಲ, ವಿಷಯವನ್ನು ತಿಳಿಸುವುದಿಲ್ಲ. ಪರಮಾತ್ಮ ಅಂಶವಾದ ಭಗವಂತನು ಹೇಳಿದ ಮಾತನ್ನು ಪ್ರಕೃತಿ ಜನಿತವಾದ ಮಾಯೆ ಖಂಡಿಸಿ ಜನ್ಮಗಳು ಇಲ್ಲವೆಂದು ಬೋಧಿಸುತ್ತದೆ. ಉಳಿದ ದೈವಜ್ಞಾನ ವಿಷಯಗಳೆಲ್ಲವು ಹೊರಗೆ ಅನುಭವ ರೀತಿಯಲ್ಲಿ ತಿಳಿಯುವುದಕ್ಕೆ ಅವಕಾಶವಿದೆ. ಅವುಗಳೆಲ್ಲವನ್ನು ಬ್ರಹ್ಮವಿದ್ಯಾಶಾಸ್ತ್ರವು ನಿರೂಪಿಸುತ್ತದೆ. ಒಂದು ಜನ್ಮಗಳ ವಿಷಯವು ಯಾರಿಗೂ ಪ್ರತ್ಯಕ್ಷ ಪ್ರಮಾಣವಾಗಿ ಕಾಣಿಸುವುದಿಲ್ಲ. ಆದ್ದರಿಂದ ಆತ್ಮನೇ ಸ್ವತಃವಾಗಿ ಪುನರ್ಜನ್ಮಗಳ ವಿಷಯವನ್ನು ನಿರೂಪಣೆಗೆ ತೆಗೆದುಕೊಂಡು ಬರಬೇಕಾಗಿರುವ ಅವಶ್ಯ ಏರ್ಪಟ್ಟಿದೆ. ಆತ್ಮ ಶರೀರದಲ್ಲಿ ಎರಡು ಕಾರ್ಯಗಳನ್ನು ಮಾಡುತ್ತಿದೆಯೆಂದು ನಾವು ಮೊದಲೇ ಹೇಳಿಕೊಂಡಿದ್ದೇವೆ. ಶರೀರದೊಳಗಿನ ಅಂತರ್ಗತ ಭಾಗಗಳನ್ನು ಅವುಗಳ ಕಾರ್ಯಗಳನ್ನು ತಿಳಿದುಕೊಂಡಾಗಲೆ ಅಸಲಾದ ಆಧ್ಯಾತ್ಮಿಕವಾಗುತ್ತದೆಂದು ಸಹ ಹೇಳಿಕೊಂಡಿದ್ದೇವೆ. ಅಷ್ಟೇ ಅಲ್ಲದೆ ಮನುಷ್ಯನಲ್ಲಿನ ಮನಸ್ಸು, ಆತ್ಮ ಪ್ರತ್ಯೇಕಿಸಿ ಎರಡು ಕೆಲಸಗಳನ್ನು ಮಾಡುತ್ತಿವೆಯೆಂದು ಸಹ ಹೇಳಿಕೊಂಡಿದ್ದೇವೆ. ಶರೀರದಲ್ಲಿ ಮನಸ್ಸು, ಆತ್ಮ ಎರಡು ಕೆಲಸಗಳು ಮಾಡುವುದು ಶಾಸ್ತ್ರಬದ್ಧವೂ, ವಾಸ್ತವವೂ ಹಾಗಿರುವಾಗ ಮನುಷ್ಯನ ಮಸ್ತಕದಲ್ಲಿ ಆತ್ಮದ ಮೇಲೆ ಒಂದು ಪ್ರಶ್ನೆ ಬರುತ್ತದೆ. ಅದೇನೆಂದರೆ! ಶರೀರದಲ್ಲಿ ಪ್ರಕೃತಿ ಸಂಬಂಧವಾದ ಮನಸ್ಸು, ಪರಮಾತ್ಮ ಸಂಬಂಧವಾದ ಆತ್ಮ ಎರಡೂ ಎರಡು ಕೆಲಸಗಳನ್ನು ಮಾಡುತ್ತಿರುವಾಗ ಪ್ರಕೃತಿ ಸಂಬಂಧ ಮನಸ್ಸು ಸಹ ಆತ್ಮದೊಂದಿಗೆ ಸಮಾನವಾದ ಕೆಲಸ ಮಾಡಿದಂತೆ ಆಗುತ್ತಿದೆ ಅಲ್ಲವೆ! ಆಗ ಮನಸ್ಸಿಗಿಂತ ಆತ್ಮ ಹೆಚ್ಚಿನ ಕೆಲಸ ಮಾಡಿಲ್ಲವೆಂದು, ಮನಸ್ಸು ಮಾಡಿರುವಷ್ಟು ಕೆಲಸಗಳನ್ನೇ ಮಾಡುತ್ತಿದೆಯೆಂದು, ಆದ್ದರಿಂದ ಮನಸ್ಸಿನಿಂದ ಸಮಾನವಾಗಿ ಆತ್ಮ, ಆತ್ಮನೊಂದಿಗೆ ಸಮಾನವಾಗಿ ಮನಸ್ಸು ಕೆಲಸ ಮಾಡಿದಾಗ ಮನಸ್ಸಿಗಿಂತಲೂ ಆತ್ಮ ದೊಡ್ಡದೆಂದು ಹೇಳಲಾರೆವು ಎಂದು ಯಾರಾದರು ಪ್ರಶ್ನಿಸಬಹುದು.

ಆ ಪ್ರಶ್ನೆಗೆ ಉತ್ತರವನ್ನು ನಾವು ಈ ವಿಧದಲ್ಲಿ ಹೇಳಿಕೊಳ್ಳಬಹುದು. ಪ್ರಕೃತಿಗಿಂತ ಪರಮಾತ್ಮ ದೊಡ್ಡದು ಎಂದು ಹೇಳಿಕೊಂಡಂತೆ, ಪ್ರಕೃತಿ

ಸಂಬಂಧವಾದ ಮನಸ್ಸಿಗಿಂತ ಪರಮಾತ್ಮ ಸಂಬಂಧವಾದ ಆತ್ಮ ಎಂದಿಗಾದರು ದೊಡ್ಡದೆ. ಮನಸ್ಸಿಗಿಂತ ಆತ್ಮ ದೊಡ್ಡದೆಂದು ಹೇಳುವುದಕ್ಕೆ ಒಂದು ಕಾರಣವಿದೆ, ಅದೇನೆಂದರೆ! ಒಬ್ಬನ ಜೀವನದಲ್ಲಿ ಮನಸ್ಸು, ಆತ್ಮ ಎರಡೂ ಎರಡು ಕೆಲಸಗಳನ್ನೆ ಮಾಡುತ್ತಿದ್ದರೂ, ಪ್ರಪಂಚದಲ್ಲಿ ಎಲ್ಲೋ ಒಂದು ಕಡೆ, ಯಾವಾಗಲೋ ಒಂದು ಸಮಯದಲ್ಲಿ, ಯಾರಲ್ಲೋ ಒಬ್ಬನಲ್ಲಿ ಆತ್ಮ ಪ್ರತ್ಯೇಕಿಸಿ ಮನಸ್ಸಿಗಿಂತ ಹೆಚ್ಚಿನದಾಗಿ ಮೂರನೆ ಕೆಲಸವನ್ನು ಸಹ ಮಾಡುತ್ತಿದೆ. ಮನಸ್ಸಿಗಿಂತ ಹೆಚ್ಚಿನದಾಗಿ ಮೂರನೆ ಕೆಲಸವನ್ನು ಸಹ ಆತ್ಮ ಮಾಡುವುದರಿಂದ ಆತ್ಮ ಮನಸ್ಸಿನೊಂದಿಗೆ ಸಮಾನವಾದದ್ದು ಅಲ್ಲವೆಂದು, ಶರೀರದಲ್ಲಿ ಎಲ್ಲದಕ್ಕಿಂತ ದೊಡ್ಡದು ಆತ್ಮವೆಂದು ಹೇಳಬಹುದು. ಎಲ್ಲರ ಜೀವನದಲ್ಲಿ ಮೂರನೆ ಕೆಲಸ ಅವಶ್ಯವಿಲ್ಲ, ಆದ್ದರಿಂದ ಆತ್ಮ ಮನಸ್ಸಿನೊಂದಿಗೆ ಸಮಾನವಾಗಿ ಎರಡು ಕೆಲಸಗಳನ್ನೇ ಮಾಡುತ್ತಿದ್ದರೂ, ಅವಶ್ಯಬಂದಾಗ ಮೂರನೆ ಕೆಲಸವನ್ನು ಮಾಡುವ ಸಾಮರ್ಥ್ಯವನ್ನು ಹೊಂದಿರುವುದರಿಂದ ಆತ್ಮ ಶರೀರದಲ್ಲಿ ಎಲ್ಲಾಭಾಗಗಳಿಗಿಂತ ದೊಡ್ಡದೆಂದು ಹೇಳಬಹುದು.

ಸರ್ವ ಸಾಧಾರಣವಾಗಿ ಆತ್ಮ ಶರೀರದಲ್ಲಿ ಕೆಲಸ ಮಾಡುತ್ತಿದೆ ಯೆಂದಾಗಲಿ, ಎರಡು ಕೆಲಸಗಳನ್ನು ಮಾಡುತ್ತಿದೆಯೆಂದಾಗಲಿ ತಿಳಿಯದ ಮನುಷ್ಯರು ಕೆಲವರಿರುವುದಾಗಿ, ಜೀವಾತ್ಮ, ಪರಮಾತ್ಮವಲ್ಲದೆ ಪ್ರತ್ಯೇಕಿಸಿ ಒಂದು ಆತ್ಮ ಇದೆಯೆಂದು ತಿಳಿಯದವರು ಎಷ್ಟೋ ಇದ್ದಾರೆ. ಆತ್ಮ ಇರುವುದೆಂಬ ವಿಷಯ 95% ರಷ್ಟು ಪ್ರಜೆಗಳಿಗೆ ತಿಳಿದಿಲ್ಲ. ಅತಿ ಕಷ್ಟದ ಮೇಲೆ ಒಂದು ಐದು ಶಾತ ಜನಕ್ಕೆ ಆತ್ಮ ಎನ್ನುವುದು ಒಂದಿದೆಯೆಂದು ತಿಳಿದಿದ್ದರೂ, ಅದರಲ್ಲಿ ಯಾರಿಗು ಆತ್ಮ ಯಾವಾಗಲು ಎರಡು ಕೆಲಸಗಳನ್ನು ಮಾಡುತ್ತದೆಂದಾಗಲಿ, ಅವಶ್ಯಬಂದಾಗ ಮೂರನೆ ಕೆಲಸವನ್ನು ಸಹ ಮಾಡುವುದೆಂದಾಗಲಿ ತಿಳಿದಿಲ್ಲ. ಅಷ್ಟು ಆಳವಾಗಿ ತಿಳಿದುಕೊಳ್ಳುವುದಕ್ಕೆ ದೊಡ್ಡವರಾದ ಪ್ರವಕ್ತರು ಸಹ ಆತ್ಮ ವಿಷಯವನ್ನು ಅಷ್ಟು ಆಳವಾಗಿ ಎಲ್ಲಿಯೂ ಹೇಳಲಿಲ್ಲ. ಒಂದು ಭಗವದ್ಗೀತೆಯಲ್ಲಿ ಮಾತ್ರ ಭಗವಂತನು ಹೇಳಿದ ಜ್ಞಾನದಲ್ಲಿ ಆತ್ಮ ಎಷ್ಟು ದೊಡ್ಡದೋ

ತಿಳಿದುಹೋಗುತ್ತದೆ. ಆದರೆ ಗೀತೆ ಯಾರಿಗೂ ಅರ್ಥವಾಗದೆ ಹೋಗಿರುವು ದರಿಂದ ಆತ್ಮ ಸಹ ಯಾರಿಗೂ ಅರ್ಥವಾಗಿಲ್ಲ. ಹಾಗೇ ಶರೀರದಲ್ಲಿ ಅದರ ಕರ್ತವ್ಯವೇನೋ ಸಹ ತಿಳಿಯದೆ ಹೋಗಿದೆ. ಆತ್ಮ ಮಾಡುವ ಮೂರನೆ ಕೆಲಸ ಏನೋ ಈಗ ತಿಳಿದುಕೊಳ್ಳೋಣ.

ಆತ್ಮ ಮಾಡುವ ಮೂರು ಕೆಲಸಗಳಲ್ಲಿ ಮೊದಲನೆಯದನ್ನು ಯಾವಾಗಲು ಒಂದು ಕ್ಷಣ ಸಹ ಬಿಡುವಿಲ್ಲದೆ ಮಾಡುತ್ತಿದೆ. ಆತ್ಮದವೊಂದು ಮೊದಲ ಕೆಲಸ ಸೃಷ್ಠಿ ಆದಿಯಲ್ಲಿ (ಪ್ರಭವದಲ್ಲಿ) ಆರಂಭವಾಗಿ ಸೃಷ್ಠಿ ಅಂತ್ಯ (ಪ್ರಳಯ)ದವರೆಗು ಒಂದು ಸೆಕೆಂಡು ಕಾಲ ಸಹ ಸುಮ್ಮನಿರದೆ ನಡೆಯುತ್ತಿರುತ್ತದೆ. ಎಡಬಿಡದೆ ಕಾರ್ಯವನ್ನು ಆತ್ಮ ಒಂದೇ ಮಾಡುತ್ತಿದೆ. ಈ ವಿಷಯವು ಯಾರಿಗು ತಿಳಿಯದಿದ್ದರು ಪ್ರಪಂಚದಲ್ಲಿ ನಡೆಯುವ ಪ್ರತಿ ಕಾರ್ಯವು ಆತ್ಮದಿಂದಲೆ ನಡೆಯುತ್ತಿದೆ. ಆತ್ಮ ಎಲ್ಲಾ ಶರೀರಗಳಲ್ಲಿ ಇದ್ದು ಪ್ರತಿಕ್ಷಣವು ಕೆಲಸ ಮಾಡುತ್ತಿದೆ. ನಿಮಗೆ ತಿಳಿದರೂ ತಿಳಿಯದೆ ಹೋದರೂ ಪ್ರಪಂಚದಲ್ಲಿ ಯಾವ ಜೀವರಾಶಿ ಮಾಡುತ್ತಿರುವ ಕೆಲಸವಾಗಲಿ ಅದು ಆತ್ಮ ಮಾಡುವುದೆ! ಜೀವರಾಶಿಗಳು ನಾವು ಮಾಡುತ್ತಿದ್ದೇವೆಂದುಕೊಂಡ ಪ್ರತಿ ಕಾರ್ಯವನ್ನು ಆತ್ಮವೇ ಮಾಡುತ್ತಿದೆ ವಿನಃ, ಜೀವಿಗಳು ಮಾಡುತ್ತಿಲ್ಲ. ವಿಶ್ವದಲ್ಲಿ ನಡೆಯುವ ಕೆಲಸ ಯಾವುದಾದರು ಆತ್ಮವೇ ಮಾಡುತ್ತಿದೆಯೆಂದು ತಿಳಿಯದೆ ಹೋಗುವುದೆ ದೊಡ್ಡ ಅಜ್ಞಾನವಾಗುತ್ತಿದೆ. ಆತ್ಮ ಮಾಡುವ ಮೊದಲ ಕೆಲಸವನ್ನು ತಿಳಿದುಕೊಂಡರೆ ಮನುಷ್ಯ ಕರ್ಮಯೋಗಿ ಆಗಬಲ್ಲನು. ಒಬ್ಬ ಮನುಷ್ಯ ಕರ್ಮಯೋಗಿ ಆಗುವುದಕ್ಕೆ ಯಾವ ಸಾಧನೆ ಅವಶ್ಯವಿಲ್ಲ. ಬ್ರಹ್ಮಯೋಗವನ್ನು ಸಾಧಿಸುವುದಕ್ಕೆ ಮನುಷ್ಯನಿಗೆ ಸಾಧನೆ ಅವಶ್ಯವಾಗಲಿ, ಕರ್ಮಯೋಗವನ್ನು ಸಾಧಿಸುವುದಕ್ಕೆ ಸಾಧನೆ ಕೆಲಸಕ್ಕೆ ಬರುವುದಿಲ್ಲ. ಯಾವಾಗಾದರೆ ನಮ್ಮ ಶರೀರದಲ್ಲಿ ಜೀವಿಯೊಂದಿಗೆ ಆತ್ಮ ಒಂದಿದೆಯೆಂದು, ಅದೇ ಚಿಕ್ಕ, ದೊಡ್ಡ ಮತ್ತು ಶರೀರದ ಒಳಗೆ, ಶರೀರದ ಹೊರಗಿನ ಕೆಲಸಗಳನ್ನು ಮಾಡುತ್ತಿದೆಯೆಂದು ತಿಳಿದು, ಆ ವಿಷಯವು ಯಾವಾಗಲು ಜ್ಞಾಪಕ ಇದ್ದರೆ, ಯಾವ ಮನುಷ್ಯನಾದರು ಕರ್ಮಯೋಗಿ ಆಗಬಲ್ಲನು. ಭಗವದ್ಗೀತೆಯಲ್ಲಿ

ಭಗವಂತನು ಹೇಳಿದ ಕರ್ಮಯೋಗ ಸೂತ್ರ ಇದನ್ನೆ. ಕರ್ಮಯೋಗಕ್ಕಾಗಿಯೇ ಸಾಧನೆ ಮಾಡೆಂದು, ಧ್ಯಾನ ಮಾಡೆಂದು ಗೀತೆಯಲ್ಲಿ ಎಲ್ಲಿಯೂ ಹೇಳಲಿಲ್ಲ. ಸಾಧನೆ ಮಾಡಬೇಕಾಗಿರುವುದು ಬ್ರಹ್ಮಯೋಗಕ್ಕಾಗಿ ಮಾತ್ರವೆ ಎಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಪ್ರಸ್ತುತ ಕಾಲದಲ್ಲಿ ಎಷ್ಟೋಜನ ಧ್ಯಾನ ಮಾಡುತ್ತಿದ್ದರೂ, ಅವರಿಗೆ ಯೋಗಗಳು ಎಷ್ಟು ವಿಧಗಳೋ ತಿಳಿದಿಲ್ಲ. ಅವರು ಮಾಡುತ್ತಿರುವ ಧ್ಯಾನ ಯಾವ ಯೋಗಕ್ಕೆ ಸಂಬಂಧಪಟ್ಟಿರುವುದೋ ಸಹ ತಿಳಿದಿಲ್ಲ. ಅವರು ಮಾಡುವ ಸಾಧನೆ ವಿಷಯವೆ ಅವರಿಗೆ ಸರಿಯಾಗಿ ತಿಳಿದಿಲ್ಲ, ಯಾರೋ ಹೇಳಿದರೆ ಅದರ ಪ್ರಕಾರ ಮಾಡುತ್ತಾರೆ. ಅಂತವರಿಗೆ ಶರೀರದ ಹೊರಗೆ ಮಾಡುವ ಸಾಧನೆ ವಿಷಯವೆ ಸರಿಯಾಗಿ ತಿಳಿಯದೆ ಇರುವಾಗ, ಒಳಗಿರುವ ಮನಸ್ಸು ವಿಷಯವಾಗಲಿ, ಅದಕ್ಕಿಂತ ಮೀರಿದ ಆತ್ಮ ವಿಷಯವಾಗಲಿ ಸ್ವಲ್ಪವಾದರೂ ತಿಳಿದಿಲ್ಲ. ಆತ್ಮ ವಿಷಯ ತಿಳಿಯದಿರುವಾಗ ಅದು ಎಷ್ಟು ಕೆಲಸಗಳು ಮಾಡುತ್ತಿದೆಯೊ, ಹೇಗೆ ಇದೆಯೊ, ಹೇಗೆ ತಿಳಿಯಬಲ್ಲರು? ಆದ್ದರಿಂದ ಆತ್ಮದಿಂದ ಎಲ್ಲವೇಳೆಯಲ್ಲು ನಡೆಯುವ ಮೊದಲ ಕೆಲಸವಾಗಲಿ, ಆಗಿಂದಾಗ್ಗೆ ನಡೆಯುವ ಎರಡನೆ ಕೆಲಸವಾಗಲಿ, ಯಾರಿಗೂ ತಿಳಿಯದೆ ಹೋಗಿದೆ. ಇನ್ನು ಮೂರನೆ ಕೆಲಸ ಏನೋ ಸಹ ತಿಳಿಯದೆಂದೇ ಹೇಳಬಹುದು.

ಈಗ ಅವಕಾಶ ಸಿಕ್ಕಿರುವುದರಿಂದ ನೀವು ನನ್ನನ್ನು ವೇಗವಾಗಿ ಒಂದು ಪ್ರಶ್ನೆಯನ್ನು ಕೇಳಬಹುದು. ಅದೇನೆಂದರೆ! ಭೂಮಿಮೇಲೆ ಯಾರಿಗೂ ತಿಳಿಯದ ಆತ್ಮದ ಮೂರನೇ ಕೆಲಸ ನಿಮಗೆ ಹೇಗೆ ತಿಳಿದಿದೆ? ಯಾರಿಗೂ ತಿಳಿಯದೆಂದು ನೀವೇ ಹೇಳುತ್ತಿರುವಾಗ, ಅದನ್ನು ನೀವು ಹೇಗೆ ಹೇಳುತ್ತಿದ್ದೀರ? ಎಂದು ಪ್ರಶ್ನಿಸಬಹುದು. ಅದಕ್ಕೆ ನಾನು ನೇರವಾಗಿ ಹೇಳುವ ಸಮಾಧಾನ ಏನೆಂದರೆ! ಯಾರಿಗೂ ತಿಳಿಯದಿರುವುದನ್ನು ನಾನು ಹೇಳುವುದು ಸಹ ಒಂದು ಕೆಲಸವೆ ತಾನೆ! ಆ ಹೇಳುವುದು ಎನ್ನುವ ಕೆಲಸವನ್ನು ಮಾಡುತ್ತಿರುವುದು ನಾನೆಂದು ನಿಮಗೆ ಮೇಲ್ನೋಟಕ್ಕೆ ತಿಳಿದರೂ, ನನಗೆ ಮಾತ್ರ ಪ್ರತಿ ಕೆಲಸವನ್ನು ಮಾಡುವುದು ಆತ್ಮವೆಂದು, ನಾನಲ್ಲವೆಂದು ಚೆನ್ನಾಗಿ ಜ್ಞಾಪಕವಿದೆ. ನಾನಿರುವ ಶರೀರದಲ್ಲಿ

ನನಗೆ ಜೊತೆಯಾಗಿ ಒಬ್ಬನಿದ್ದಾನೆಂದು, ಅವನೇ ಈ ಶರೀರಕ್ಕೆ ಅಧಿಪತಿಯೆಂದು, ಆತನು ಮಾಡದೆ ಯಾವ ಕೆಲಸ ಶರೀರದಲ್ಲಿ ನಡೆಯುವುದಿಲ್ಲವೆಂದು, ಅವನೇ ನನ್ನ ಪಕ್ಕದವನೆಂದು, ಅವನನ್ನೇ ಆತ್ಮ ಎನ್ನುತ್ತಿದ್ದೇವೆಂದು ಹೇಳುತ್ತಿದ್ದೇನೆ. ನಾನು ಮಾಡದ ಕೆಲಸವನ್ನು ನಾನೇ ಮಾಡಿದ್ದೇನೆಂದು ಹೇಳುವುದು ತಪ್ಪಲ್ಲವೆ! ಅಂತಹ ತಪ್ಪನ್ನು ನಾನು ಎಂದಿಗೂ ಮಾಡುವುದಿಲ್ಲ. ಹಾಗೆ ಹೇಳಿದರೆ ನನ್ನ ಪಕ್ಕದವನನ್ನು ನಾನು ಮೋಸ ಮಾಡಿದಹಾಗೆ ತಾನೆ! ಆತ್ಮ ಮಾಡಿದ ಕೆಲಸವನ್ನು ಜೀವಾತ್ಮ ನಾನೆಂದು ಅಜ್ಞಾನದಿಂದ ಹೇಳುವುದು ಆತ್ಮವನ್ನು ಅವಮಾನ ಪಡಿಸಿದಂತಾಗುತ್ತದೆ. ಅದನ್ನೇ ಆತ್ಮದ್ರೋಹ ಎನ್ನುತ್ತೇವೆ. ನಾನು ಎಲ್ಲರ ಹಾಗೆ ಆತ್ಮದ್ರೋಹಿ ಅಲ್ಲ. ಯಾರಿಗೂ ತಿಳಿಯದ ಆತ್ಮ ರಹಸ್ಯ ಆತ್ಮಕ್ಕೇ ತಿಳಿದಿರುತ್ತದೆ. ಆದ್ದರಿಂದ ಆತ್ಮ ತನ್ನ ಮೂರನೆ ಕೆಲಸವನ್ನು ಹೇಳುತ್ತಿದೆ, ಆದರೆ ನಾನು ಎಷ್ಟು ಮಾತ್ರವಲ್ಲ. ಶರೀರದಲ್ಲಿ ನಡೆಯುವ ಕೆಲಸಗಳನ್ನು ಬುದ್ಧಿಯಿಂದ ನೋಡುತ್ತಾ, ಅವುಗಳನ್ನು ಅನುಭವಿಸುವುದೇ ನನ್ನ ಕೆಲಸ. ಅಷ್ಟೇ ಅಲ್ಲದೆ ಉಳಿದ ಕೆಲಸಗಳನ್ನು ಆತ್ಮವೇ ಮಾಡುತ್ತಿದೆ. ಆತ್ಮವೊಂದರ ಮೂರನೆ ಕೆಲಸವನ್ನು ಸಹ ಆತ್ಮವೇ ನಾನಿರುವ ಶರೀರದಿಂದ ತಿಳಿಯುವಂತೆ ಮಾಡುತ್ತಿದೆ.

ಮನುಷ್ಯನ ಸಜೀವ ಶರೀರದಲ್ಲಿ ಎಲ್ಲವೇಳೆಯಲ್ಲು ನಡೆಯುವುದು ಆತ್ಮದ ಮೊದಲ ಕೆಲಸವಾದಾಗ, ಆಗಾಗ ನಡೆಯುವದು ಆತ್ಮದವೊಂದು ಎರಡನೆ ಕೆಲಸವಾದಾಗ, ಎಷ್ಟೋ ಜನ್ಮಗಳಲ್ಲಿ ಒಂದುಸಲ ನಡೆಯುವುದು ಆತ್ಮದವೊಂದು ಮೂರನೆ ಕೆಲಸವೆಂದು ಹೇಳಿಕೊಂಡಿದ್ದೇವೆ. ಜೀವಿಗೆ **ಪುನರ್ಜನ್ಮಗಳಿವೆಯೆಂದು ತಿಳಿಸುವ ನಿಮಿತ್ತ ಆತ್ಮ ಕೆಲಸ ಮಾಡುವುದು ಮೂರನೆ ಕೆಲಸ ಆಗುತ್ತದೆ**. ಆತ್ಮ ಮೂರನೆ ಕೆಲಸ ಮಾಡದೆ ಹೋದರೆ ಪುನರ್ಜನ್ಮಗಳು ಇವೆಯೆಂದು ಹೇಳುವುದಕ್ಕೆ ಆಧಾರ ಇಲ್ಲದೆ ಹೋಗುತ್ತದೆ. ಆದ್ದರಿಂದ ಇರುವ ಸತ್ಯವನ್ನು ತಿಳಿಸುವುದಕ್ಕೆ, **"ಧೃವಂ ಜನ್ಮ ಮೃತಸ್ಯಚ"** ಎನ್ನುವ ಶಾಸ್ತ್ರವಚನ ನಿರೂಪಣೆಯಾಗಿ ತಿಳಿಯುವುದಕ್ಕೆ ಆತ್ಮ ತನ್ನ ಶರೀರದಲ್ಲಿ ಮೂರನೆ ಕೆಲಸವನ್ನು

ಮಾಡಿ ತೋರಿಸಿದೆ. ಹಾಗೆ ಆತ್ಮ ಮಾಡಿದ ಮೂರನೆ ಕೆಲಸವನ್ನು ವಿಶದೀಕರಿಸಿಕೊಂಡು ನೋಡೋಣ. ಭಗವದ್ಗೀತೆಯಲ್ಲಿ ಜ್ಞಾನಯೋಗ ಐದನೆ ಶ್ಲೋಕದಲ್ಲಿ *"ಬಹೂನಿಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ, ತಾನ್ಯಹಂ ವೇದ ಸರ್ವಾಣಿ ನತ್ವಂ ವೇತ್ಥ ಪರಂತಪ"* "ಅರ್ಜುನಾ! ನನಗೆ ಎಷ್ಟೋ ಜನ್ಮಗಳು ಬಂದಿವೆ, ನಿನಗೂ ಹಾಗೆ ಎಷ್ಟೋ ಜನ್ಮಗಳು ಬಂದಿವೆ. ನನಗೆ ಬಂದಿರುವ ಜನ್ಮಗಳೆಲ್ಲ ನನಗೆ ತಿಳಿದಿವೆ, ಆದರೆ ನಿನಗೆ ಬಂದಿರುವ ಜನ್ಮಗಳು ನಿನಗೆ ತಿಳಿದಿಲ್ಲ" ಎಂದು ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ. ಆಗ ಕೃಷ್ಣನು ಅರ್ಜುನನು ಇಬ್ಬರೂ ಮನುಷ್ಯರೇ ಆದರೂ, ಇಬ್ಬರಲ್ಲಿಯೂ ಮನಸ್ಸು, ಆತ್ಮ ಎರಡೂ ಇದ್ದು ಅವುಗಳ ಕೆಲಸವನ್ನು ಅವು ಮಾಡುತ್ತಾ ಇದ್ದರೂ, ಅರ್ಜುನನಿಗೆ ತಿಳಿಯದ ಗತ ಜನ್ಮಗಳ ವಿಷಯಗಳು ಕೃಷ್ಣನಿಗೆ ಹೇಗೆ ತಿಳಿದಿವೆ ಎಂದು ಪ್ರಶ್ನೆ ಬಾರದೆ ತಪ್ಪುವುದಿಲ್ಲ. ಹಾಗೆ ಬಂದಿರುವ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಂಡರೆ, ಅರ್ಜುನನ ಶರೀರದಲ್ಲಿನ ಆತ್ಮ ಆ ಶರೀರದಲ್ಲಿ ಎರಡು ಕೆಲಸಗಳನ್ನೆ ಮಾಡುತ್ತಿದೆಯೆಂದು ತಿಳಿಯುತ್ತಿದೆ. ಎಲ್ಲರ ಶರೀರದಲ್ಲಿ ಮಾಡುವ ವಿಧದಲ್ಲಿಯೆ ಅರ್ಜುನನ ಶರೀರದಲ್ಲಿ ಸಹ ಆತ್ಮ ಎರಡು ಕೆಲಸಗಳನ್ನು ಮಾಡುತ್ತಿರುವುದರಿಂದ, ಯಾರಿಗೂ ತಮ್ಮ ಗತ ಜನ್ಮದ ವಿಷಯಗಳು ತಿಳಿಯದಹಾಗೆ ಅರ್ಜುನನಿಗೂ ಸಹ ಕಳೆದ ಜನ್ಮಗಳ ವಿಷಯ ತಿಳಿಯಲಿಲ್ಲ. ಶ್ರೀ ಕೃಷ್ಣನ ಶರೀರದಲ್ಲಿನ ಆತ್ಮ ತನ್ನ ಮೂರನೆ ಕೆಲಸವನ್ನು ಸಹ ಮಾಡಿರುವುದರಿಂದ, ಕೃಷ್ಣನಿಗೆ ತನ್ನ ಹಿಂದಿನ ಜನ್ಮ ವಿಷಯಗಳೆಲ್ಲವು ತಿಳಿದುಹೋಗಿವೆ. ಆದ್ದರಿಂದ ಕೃಷ್ಣನು ಹಿಂದಿನ ಜನ್ಮಗಳೆಲ್ಲಾ ನನಗೆ ತಿಳಿದಿವೆ ಎಂದಿದ್ದಾನೆ.

ಒಬ್ಬ ಮನುಷ್ಯನ ಶರೀರದಲ್ಲಿ ಆತ್ಮ ಯಾವಾಗಲು ಕೆಲಸ ಮಾಡುತ್ತಿರುವುದರಿಂದ, ಮನುಷ್ಯ ಜೀವನದಲ್ಲಿನ ಪ್ರತಿ ಚಿಕ್ಕ ವಿಷಯದೊಂದಿಗೆ ಸಹ ಎಲ್ಲಾ ವಿಷಯಗಳು ಆತ್ಮಕ್ಕೆ ತಿಳಿದಿರುತ್ತವೆ. ಮನುಷ್ಯನ ಜೀವನದಲ್ಲಿ ಎಲ್ಲ ವೇಳೆಯಲ್ಲು ಎಲ್ಲ ಕೆಲಸಗಳನ್ನು ಆತ್ಮ ಮಾಡುವುದರಿಂದ ಮನುಷ್ಯನ ಜೀವನದಲ್ಲಿ ಆತ್ಮಕ್ಕೆ ತಿಳಿಯದಿರುವುದು ಏನೂ ಇಲ್ಲ. ಹಾಗೆ ಎಲ್ಲ ವಿಷಯಗಳನ್ನು ತಿಳಿದ

ಆತ್ಮ, ತನಗೆ ತಿಳಿದ ಹಿಂದಿನ ಜನ್ಮ ವಿಷಯಗಳನ್ನು ಮನುಷ್ಯ ಜೀವನದಲ್ಲಿ ತಾನೆ ಸ್ವತಃವಾಗಿ ಜ್ಞಾಪಕ ಬರುವಂತೆ ತಿಳಿಸುತ್ತದೆ. ಹಾಗೆ ಹಿಂದಿನ ಜನ್ಮಗಳ ವಿಷಯಗಳನ್ನು ಯಾವಾಗಲೋ ಒಂದು ಸಮಯದಲ್ಲಿ, ಯಾರಿಗೊ ಒಬ್ಬನಿಗೆ ಆತ್ಮ ತಿಳಿಯಪಡಿಸುವುದೆ ಆತ್ಮವೊಂದರ ಮೂರನೆ ಕೆಲಸ. ಕೃಷ್ಣನ ಶರೀರದಲ್ಲಿನ ಆತ್ಮ ಗತಜನ್ಮಗಳ ವಿಷಯಗಳೆಲ್ಲವನ್ನು ಕೃಷ್ಣನಿಗೆ ತಿಳಿಯಪಡಿಸಿದೆ ಆದ್ದರಿಂದ ಆತನು ನನ್ನ ಹಿಂದಿನ ಜನ್ಮಗಳೆಲ್ಲವನ್ನು ನಾನು ಹೇಳಬಲ್ಲೆನು ಎಂದಿದ್ದಾನೆ. ಶ್ರೀಕೃಷ್ಣನು ಹಾಗೆ ಹೇಳಿರುವುದರಿಂದ ಆತ್ಮ ತನ್ನ ಮೂರನೆ ಕೆಲಸವನ್ನು ಕೃಷ್ಣನ ಶರೀರದಲ್ಲಿ ನಿರೂಪಿಸಿಕೊಂಡಿದೆಯೆಂದು ಅರ್ಥವಾಗುತ್ತಿದೆ. ಆ ವಿಧವಾಗಿ ಶ್ರೀಕೃಷ್ಣನ ಶರೀರದಲ್ಲಿನ ಆತ್ಮ, ಕೃಷ್ಣನ ಕಳೆದು ಹೋದ ಜನ್ಮಗಳನ್ನು ಕುರಿತು ತಿಳಿಸಿರುವುದರಿಂದ, ಮನುಷ್ಯನಿಗೆ ಪುನರ್ಜನ್ಮಗಳಿವೆಯೆನ್ನುವ ವಿಷಯ ನಿರೂಪಣೆಗೆ ಬಂದಿದೆ. ಆದರೆ ಇಲ್ಲಿ ಕೆಲವರಿಗೆ ಒಂದು ಅನುಮಾನ ಬರಬಹುದು. ಅದೇನೆಂದರೆ! ಕೃಷ್ಣನು ಇಂದೂ (ಹಿಂದೂ) ಮತಕ್ಕೆ ಪ್ರವಕ್ತನಂತವನು. ಆದ್ದರಿಂದ ಆತನು ಸ್ವತಃವಾಗಿ ಪುನರ್ಜನ್ಮಗಳ ವಿಷಯದಲ್ಲಿ ಅಸತ್ಯವನ್ನು ಹೇಳಿರಬಹುದು ಅಲ್ಲವೆ! ಎಂದು ಯಾರಾದರು ಕೇಳಬಹುದು. ಇತರ ಮತಗಳಲ್ಲಿ ಪುನರ್ಜನ್ಮಗಳು ಇಲ್ಲವೆಂದು ಹೇಳಿದಾಗ, ಒಂದು ಇಂದೂ (ಹಿಂದೂ) ಮತದಲ್ಲಿಯೇ ಇವೆಯೆಂದು ಹೇಳಿರುವುದರಿಂದ ಈ ಪ್ರಶ್ನೆ ಕೆಲವರಿಗೆ ಬರಬಹುದು. ಇಂತಹ ಪ್ರಶ್ನೆಗೆ ನಮ್ಮ ಸಮಾಧಾನ ಏನೆಂದರೆ!

ಮಾನವನು ಯಾವ ಮತದಲ್ಲಿ ಹುಟ್ಟಿದರೂ ಒಬ್ಬ ಮನುಷ್ಯನಿಗೆ ಶರೀರದಲ್ಲಿನ ನಿರ್ಮಾಣ ಹೇಗಿದೆಯೊ ಹಾಗೆ ಮನುಷ್ಯರೆಲ್ಲರಿಗು ಇದೆ. ಒಂದೊಂದು ಮತಕ್ಕೆ ಒಂದೊಂದು ಶರೀರ ನಿರ್ಮಾಣವಾಗಲಿ, ಶರೀರ ಅಂತರ್ಗತ ಯಂತ್ರಾಂಗವಾಗಲಿ ಇಲ್ಲ. ಮನುಷ್ಯರು ಸೃಷ್ಠಿಸಿಕೊಂಡಿರುವವೇ ಮತಗಳು, ದೇವರು ಮಾನವ ಜಾತಿಯನ್ನು ಸೃಷ್ಠಿಸಿದ್ದಾನಾಗಲಿ, ಮತಗಳನ್ನು ಸೃಷ್ಠಿಸಲಿಲ್ಲ, ದೇವರ ಸೃಷ್ಟಿಯಲ್ಲಿ ಮನುಷ್ಯರೆಲ್ಲರು ಒಂದೇ. ಆದ್ದರಿಂದ ಪ್ರಪಂಚದಲ್ಲಿನ ಎಲ್ಲಾ ಮತಗಳ ಮನುಷ್ಯರು ಒಂದೇ ವಿಧದಲ್ಲಿ ಸೃಷ್ಠಿಸಲ್ಪಟ್ಟಿದ್ದಾರೆ.

ಒಂದೇ ವಿಧವಾದ ಅನುಭೂತಿಗಳು ಮನುಷ್ಯರಿಗಿವೆ. **ಮನುಷ್ಯ ಹುಟ್ಟಿದ ನಂತರ ಬಂದ ಮತಕ್ಕೆ ಸಂಬಂಧಿಸಿದ ಅಲಂಕಾರಗಳನ್ನು, ಆಚರಣೆಗಳನ್ನು ಪಕ್ಕಕ್ಕೆ ಇಟ್ಟರೆ, ಇವನು ಇಂತದ್ದೇ ಮತದವನೆಂದು ಯಾರೂ ಹೇಳುವುದಿಲ್ಲ.** ಇದರಿಂದ ಒಬ್ಬ ಮನುಷ್ಯನಿಗೆ ಯಾವ ನಿರ್ಮಾಣವಿದೆಯೊ ಅದೇ ನಿರ್ಮಾಣವು ಎಲ್ಲರಿಗೂ ಶರೀರದೊಳಗೆ, ಹೊರಗೆ ಇದೆಯೆಂದು ಹೇಳಬಹುದು. ಹಾಗೆ ಒಂದು ವಿಷಯವು ಮನುಷ್ಯನಿಗೆ ನಿರೂಪಣೆಗೆ ಬಂದರೆ ಅದು ಸಮಸ್ತ ಮಾನವ ಜಾತಿಗೆ ಅನ್ವಯಿಸುತ್ತದೆ. ಹಾಗೆಯೇ ದೇವರು ಒಬ್ಬ ಮನುಷ್ಯನಿಗೆ ತೋರಿಸಿದ ಧರ್ಮವೇ ಪ್ರತಿ ಮನುಷ್ಯನಿಗೂ ಅನ್ವಯಿಸುತ್ತದೆ. ಸಾವು ಹುಟ್ಟುಗಳು ಒಬ್ಬ ಮನುಷ್ಯನೊಂದರ ಜೀವನ ಧರ್ಮವಾದಾಗ ಅವು ಎಲ್ಲರಿಗೂ ಅನ್ವಯಿಸುತ್ತವೆ. ಹಾಗೆ ಯೌವ್ವನ, ವೃದ್ಧಾಪ್ಯ ಒಬ್ಬ ಮನುಷ್ಯನ ಶರೀರ ಮಾರ್ಪಾಟಾದಾಗ ಅವು ಎಲ್ಲಾ ಶರೀರಗಳಿಗೆ ಮಾರ್ಪಾಟಾಗಿಯೆ ಇರುವವು. ಈ ವಿಧವಾಗಿ ಎಲ್ಲರಿಗೂ ಒಂದೇ ಧರ್ಮ ವಿಧಾನವಿರುತ್ತದೆ ಆದರೆ, ಮತಗಳಿಗೆ ಸಂಬಂಧಿಸಿದ ವಿಧಾನವು ಎಲ್ಲರಿಗೂ ಒಂದೇ ವಿಧದಲ್ಲಿ ಇರುವುದಿಲ್ಲ. ಆದ್ದರಿಂದ ಮತವನ್ನು ಪಕ್ಕಕ್ಕಿಟ್ಟು ನೋಡಿದರೆ, ದೇವರು ಹೇಳಿದ ಧರ್ಮಗಳು ಮನುಷ್ಯರೆಲ್ಲರಿಗು ಸಮಾನವಾಗಿ ಅನ್ವಯಿಸುತ್ತವೆಂದು ತಿಳಿಯುತ್ತಿದೆ. ಸಾವು ಹುಟ್ಟುಗಳ ವಿಷಯದಲ್ಲಿ ದೇವರು ಎಲ್ಲರಿಗೂ ಒಂದೇ ಧರ್ಮವನ್ನು ಹೇಳಿದ್ದಾನಾಗಲಿ, ಒಂದೊಂದು ಮತಕ್ಕೆ ಒಂದೊಂದು ವಿಧಾನವಾಗಲಿ, ಒಂದೊಂದು ಧರ್ಮವಾಗಲಿ ಹೇಳಲಿಲ್ಲ. ಒಂದುವೇಳೆ ಯಾರಾದರು ನಮ್ಮ ಮತದಲ್ಲಿ ಬೇರೆ ವಿಧಾನವಿದೆಯೆಂದು ಹೇಳಿದರೆ, ಅವರು ದೇವರ ಧರ್ಮಗಳನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ ವೆಂದು, ಅವರು ಮಾತನಾಡುವುದು ಮತದವೊಂದರ ಮಾತೆಂದು, ದೇವರ ಮಾತಲ್ಲ ಎಂದು ಗಟ್ಟಿಯಾಗಿ ಹೇಳಬಹುದು. ಹಾಗೆ ಏಕೆ ಹೇಳುತ್ತಿದ್ದೇವೆಂದರೆ! ಒಬ್ಬ ಮನುಷ್ಯನಿಗಿರುವ ಧರ್ಮವೆ ಸಮಸ್ತ ಮಾನವರಿಗೆ ಅನ್ವಯಿಸುವುದೆನ್ನುವ ಸೂತ್ರದ ಪ್ರಕಾರ ದೇವರ ಧರ್ಮವಾದರೆ ಎಲ್ಲರಿಗೂ ಅನ್ವಯಿಸುತ್ತದೆಂದು, ಮತ ಧರ್ಮವಾದರೆ ಆ ಮತ ಅವರಿಗೇ ಪರಿಮಿತವೆಂದು ಹೇಳುತ್ತಿದ್ದೇವೆ. ಮತ ಧರ್ಮವು ಹೇಳಿಕೊಳ್ಳುವುದಕ್ಕು, ಅದರ ಪ್ರಕಾರ ಅನುಸರಿಸುವುದಕ್ಕು,

ಆ ಮತಸ್ಥರಿಗೆ ಮಾತ್ರವೆ ಕೆಲಸಕ್ಕೆ ಬರುತ್ತದಾಗಲಿ, ಸಮಸ್ತ ಮಾನವರಿಗೂ ಜರುಗುವಂತದ್ದಲ್ಲ. ದೇವರ ಧರ್ಮ ಸಮಸ್ತ ಮತದವರಿಗೂ ಸಹ ಅನ್ವಯಿಸುತ್ತಿದೆ.

ಭಗವದ್ಗೀತೆಯಲ್ಲಿ ಭಗವಂತನು ಹೇಳಿದ ಧರ್ಮಗಳು ಸಮಸ್ತ ಮತದವರಿಗೆ ಅನ್ವಯಿಸುತ್ತವೆ. ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಭಗವದ್ಗೀತೆ ಹಿಂದು ಮತಕ್ಕೆ ಸಂಬಂಧಿಸಿರುವುದು ತಾನೆ! ಅದು ಸಹ ಹಿಂದೂ ಮತಕ್ಕೆ ಸಂಬಂಧಿಸಿರುವುದು ಆಗಿರುವಾಗ ಅದರಲ್ಲಿ ಹೇಳಿದ ಧರ್ಮಗಳು ಸಹ ಆ ಮತದವರಿಗೇ ಪರಿಮಿತ ಅಲ್ಲವೆ! ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನವೇನೆಂದರೆ! ಹಿಂದೂಮತ ಎನ್ನುವುದು ವಾಸ್ತವವಾಗಿ ಮತ ಅಲ್ಲ. **ಹಿಂದೂ** ಎನ್ನುವ ಶಬ್ದಕ್ಕೆ ಯಾವ ಅರ್ಥವೂ ಇಲ್ಲ. ಅದು ಮಧ್ಯದಲ್ಲಿ ಬಂದಿರುವ ಪದ. ಪೂರ್ವವು ದ್ವಾಪರಯುಗದಲ್ಲು ಅದಕ್ಕಿಂತ ಮೊದಲ ಯುಗದಲ್ಲಿಯೂ ಈ ದಿನ ಹಿಂದೂವಾಗಿರುವ ಶಬ್ದವು ಇಂದೂ ಎಂದು ಇರುತ್ತಿತ್ತು. **ಇಂದೂ** ಎಂಬ ಶಬ್ದವು ದೈವಜ್ಞಾನವನ್ನು ಸೂಚಿಸುವ ಅರ್ಥಕೊಡುವಂತದ್ದಾದೆ. ಜ್ಯೋತಿಷ್ಯ ಶಾಸ್ತ್ರವನ್ನು ಅನುಸರಿಸಿ ಇಂದೂ ಎಂಬ ಪದಕ್ಕೆ ದೈವಜ್ಞಾನಿ ಎನ್ನುವ ಭಾವನೆ ಇದೆ. ಆದ್ದರಿಂದ ದೈವಜ್ಞಾನ ತಿಳಿದ ಯಾರಾದರು ಇಂದೂಗಳೆ ಆಗುತ್ತಾರೆ. ಯಾವ ಮತದಲ್ಲಿನ ಜ್ಞಾನಿ ಆದರೂ ತಾನು ಇಂದೂ ಆಗುವನು. ಆದರೆ ಇಂದೂ ಎನ್ನುವುದು ಮತ ಅಲ್ಲ. ಪ್ರಸ್ತುತ ಕಾಲದಲ್ಲಿ ಅಜ್ಞಾನ ಬೆಳೆದು ಹೋಗಿರುವುದರಿಂದ ಇಂದೂ ಎನ್ನುವ ಶಬ್ದವು ಹಿಂದುವಾಗಿ ಬದಲಾಗಿ ಹೋಗಿದೆ. ಇಂದೂ, ಹಿಂದೂವಾಗಿ ಬದಲಾದರೂ ಭಗವದ್ಗೀತೆಯಲ್ಲಿ ಹೇಳಿದ ಧರ್ಮಗಳು ಪೂರ್ತಿ ದೈವಜ್ಞಾನಕ್ಕೆ ಸಂಬಂಧಿಸಿರುವವು. ಆದರೆ ಮತಕ್ಕೆ ಸಂಬಂಧಿಸಿರುವವಲ್ಲ. **ಇಂದೂ ಧರ್ಮಗಳಲ್ಲಿ ಮತಕ್ಕೆ ಸಂಬಂಧಿಸಿದ ನಿಯಮವಾಗಲಿ, ಆಚರಣೆಗಳಾಗಲಿ ಇರುವುದಿಲ್ಲ**. ಯಾವುವು ಇದ್ದರೂ ದೈವಕ್ಕೆ ಸಂಬಂಧಿಸಿದ ಧರ್ಮಗಳು, ಅವುಗಳ ಆಚರಣೆ ಇರುವವು. ಭಗವದ್ಗೀತೆ ಸಂಪೂರ್ಣವಾಗಿ ಇಂದೂ ಧರ್ಮಗಳನ್ನು ತಿಳಿಯುವಂತೆ ಮಾಡಿದೆ. ಆದ್ದರಿಂದ ಗೀತೆ ಸಹ ಮತ ಸಂಬಂಧ ಗ್ರಂಥವಲ್ಲವೆಂದು, ದೈವಧರ್ಮಗಳನ್ನು

ತಿಳಿಸಿದ ಗ್ರಂಥವೆಂದು ಹೇಳಬಹುದು. ಗೀತೆಯನ್ನು ಹೇಳಿದ ಕೃಷ್ಣನು ತಾನೇ ಸ್ವತಃವಾಗಿ ಕೆಲವು ಜನ್ಮಗಳನ್ನು ಹೊಂದಿದ್ದೇನೆಂದು ಹೇಳಿರುವುದು ಮತ ಸಂಬಂಧವಾಗಿ ಹೇಳಿರುವುದಲ್ಲ. ವಿಶ್ವ ವ್ಯಾಪ್ತಿಯಾಗಿ ಎಲ್ಲಾದರೂ ಎಲ್ಲರಿಗೂ ನಡೆಯುವ ಪುನರ್ಜನ್ಮಗಳ ವಿಷಯವನ್ನೇ ನಿರೂಪಣೆಯಾಗಿ ಹೇಳಿರುವುದೆ ಅಲ್ಲದೆ, ತನ್ನ ಅನುಭವಗಳನ್ನು ಆಧಾರವಾಗಿ ಹೇಳಿದ್ದಾನೆ. ಇದು ಒಬ್ಬ ಕೃಷ್ಣನಿಗೊಬ್ಬನಿಗೇನಾ ಜ್ಞಾಪಕಕ್ಕೆ ಬಂದಿರುವುದು? ಯಾರಿಗು ಇಂತಹ ಜ್ಞಾಪಕ ಬರಲಿಲ್ಲವೆ ಎಂದು ವಿಚಾರಿಸಿದರೆ, ಉಳಿದ ಮನುಷ್ಯರಲ್ಲಿಯು ಸಹ ಕೆಲವರು ಅಲ್ಲಲ್ಲಿ ಆಗಾಗ ತನ್ನ ಪುನರ್ಜನ್ಮ ಜ್ಞಾಪಕಗಳನ್ನು ಕುರಿತು ಹೇಳಿದ್ದಾರೆ. ಹಾಗೆ ಹೇಳಿದವರಲ್ಲಿ ಇಂದೂಗಳಿದ್ದಾರೆ, ಕ್ರೈಸ್ತವರಿದ್ದಾರೆ ಮುಸ್ಲಿಮ್‌ರು ಇದ್ದಾರೆ ಮತ್ತು ಉಳಿದ ಮತಸ್ಥರು ಸಹ ಇದ್ದಾರೆ. ಆದ್ದರಿಂದ ಕೃಷ್ಣನು ಹೇಳಿರುವುದು ವಿಶ್ವಮಾನವರೆಲ್ಲರಿಗೂ ಅನ್ವಯಿಸುವ ಜ್ಞಾನವೆಂದು ಅದು ಅಲ್ಲಲ್ಲಿ ಧರ್ಮವಾಗಿ ನಿರೂಪಿಸುತ್ತದೆಂದು ಅರ್ಥವಾಗುತ್ತಿದೆ. ಎಲ್ಲರ ಅನುಭವಕ್ಕೆ ಬರುವುದಾದ್ದರಿಂದ ಕೃಷ್ಣನು ಹೇಳಿದ ಜ್ಞಾನ ಮತಸಂಬಂಧ ಅಲ್ಲವೆಂದು ತಿಳಿಯುತ್ತಿದೆ.

ಕೃಷ್ಣನಿಗೆ ಹಿಂದಿನ ಜನ್ಮಗಳು ತಿಳಿದಂತೆ ಈಗ ನಮಗಾಗಲಿ, ಆಗ ಅರ್ಜುನನಿಗಾಗಲಿ ಏಕೆ ತಿಳಿಯಲಿಲ್ಲವೆಂದು ಸಹ ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರ ಈ ವಿಧವಾಗಿದೆ. ಆತ್ಮ ಮಾಡುವ ಮೂರನೆಕೆಲಸದಿಂದ ಮಾತ್ರವೆ ಗತಜನ್ಮ ಜ್ಞಾಪಕಗಳು ಬರುತ್ತವೆಂದು ಮೊದಲೇ ಹೇಳಿದ್ದೇವೆ ಅಲ್ಲವೆ! ಹಾಗೆ ಆತ್ಮ ತನ್ನ ಮೂರನೆ ಕೆಲಸವನ್ನು ಯಾವುದೋ ಒಬ್ಬರ ಜೀವನದಲ್ಲಿ, ಯಾವಾಗಲೋ ಒಂದು ಸಮಯದಲ್ಲಿ ಮಾತ್ರವೆ ಮಾಡುತ್ತದೆಂದು ಸಹ ಹೇಳಿದ್ದೇವೆ, ಆತ್ಮ ಎಲ್ಲರ ಜೀವನದಲ್ಲಿ, ಎಲ್ಲ ಜನ್ಮಗಳಲ್ಲಿ ಕೆಲಸ ಮಾಡುವುದಿಲ್ಲ. ಆದರೆ ಎಲ್ಲರಿಗೂ ಹಿಂದಿನ ಜನ್ಮ ವಿಷಯಗಳು ತಿಳಿಯುವುದಕ್ಕೆ ಅವಕಾಶವಿಲ್ಲ. ಆ ದಿನ ಅರ್ಜುನನ ಶರೀರದಲ್ಲಿನ ಆತ್ಮ ಮೂರನೆ ಕೆಲಸವನ್ನು ಮಾಡಲಿಲ್ಲವೆಂದು ತಿಳಿದ ಕೃಷ್ಣನು, ನಿನಗೆ ಹಿಂದಿನ ಜನ್ಮಗಳ ವಿಷಯಗಳು ತಿಳಿದಿಲ್ಲವೆಂದು ಅರ್ಜುನನೊಂದಿಗೆ ಹೇಳಿದ್ದಾನೆ. ಪ್ರಪಂಚದಲ್ಲಿ ಪುನರ್ಜನ್ಮಗಳಿವೆಯೆಂದು

ತಿಳಿಸುವ ನಿರೂಪಣೆ ನಿಮಿತ್ತವು, ಯಾರಲ್ಲೋ ಒಬ್ಬರಲ್ಲಿ ಆತ್ಮ ಮೂರನೆ ಕೆಲಸವನ್ನು ಮಾಡಿ, ಹಿಂದಿನ ಜನ್ಮ ವಿಷಯಗಳನ್ನು ತಿಳಿಸುತ್ತಿದೆ. ಒಂದು ವಿಷಯ ನಿಜವೋ ಅಲ್ಲವೋ ಎಂದು ತಿಳಿಯುವುದಕ್ಕೆ ಒಂದೇ ಸಾಕ್ಷಿಸಾಕು. ಎಲ್ಲರ ಸಾಕ್ಷಿ ಅವಶ್ಯವಿಲ್ಲ. ಕೋರ್ಟ್‌ನಲ್ಲಿ ಒಬ್ಬನು ಸಾಕ್ಷ್ಯವನ್ನು ಹೇಳಿದರೂ ಅದು ಸತ್ಯವಾಗಿಯೇ ಲೆಕ್ಕಿಸಲಾಗುತ್ತದೆ. ಒಂದು ಊರಲ್ಲಿ ನಡೆದ ಹತ್ಯೆಯನ್ನು ಒಬ್ಬನು ನೋಡಿದರೂ ಅವನ ಸಾಕ್ಷ್ಯವನ್ನೇ ಸತ್ಯವಾಗಿ ಲೆಕ್ಕಿಸುತ್ತಾರೆ. ಊರಲ್ಲಿರುವವರೆಲ್ಲರೂ ಹತ್ಯೆಯನ್ನು ನೋಡಬೇಕಾದ ಕೆಲಸವಿಲ್ಲ. ಎಲ್ಲಾರ ಸಾಕ್ಷ್ಯ ಅವಶ್ಯವಿಲ್ಲ. ಅದೇ ವಿಧದಲ್ಲಿ ಪುನರ್ಜನ್ಮ ಇದೆಯೆಂದು ಅರ್ಥವಾಗುವುದಕ್ಕೆ ಒಬ್ಬನಿಗೆ ಹಿಂದಿನ ಜನ್ಮ ವಿಷಯಗಳು ಜ್ಞಾಪಕಕ್ಕೆ ಬಂದು, ಅವು ನಿರೂಪಣೆಗೆ ಬಂದಾಗ, ಆ ಒಬ್ಬನ ಸಾಕ್ಷಿಯಿಂದಲೆ ಪುನರ್ಜನ್ಮ ಸತ್ಯವೆಂದು ನಿರೂಪಣೆಗೆ ಬರುತ್ತದೆ. ಆ ವಿಧದಲ್ಲಿ ಎಲ್ಲಾ ದೇಶಗಳಲ್ಲಿಯು ಎಷ್ಟೋ ನಿರೂಪಣೆಗೆ ಬಂದಿರುವ ಹಿಂದಿನ ಜನ್ಮಗಳ ಜ್ಞಾಪಕಗಳಿವೆ.

ಹಿಂದಿನ ಜನ್ಮಗಳಲ್ಲಿ ಜೀವಿಯೊಂದಿಗೆ ಶರೀರದಲ್ಲಿರುವ ಆತ್ಮ, ಪ್ರಸ್ತುತ ಜನ್ಮದಲ್ಲಿ ನೇರವಾಗಿ ಬುದ್ಧಿಗೆ ಹಿಂದಿನ ಜನ್ಮ ವಿಷಯಗಳು ತಿಳಿಸಿರುವುದರಿಂದ, ಬುದ್ಧಿಯಿಂದ ಜೀವಿಗೆ ಹಿಂದಿನ ಜನ್ಮದಲ್ಲಿ ನಡೆದ ವಿಷಯಗಳು ತಿಳಿಯುತ್ತಿವೆ. ಹಿಂದಿನ ಜನ್ಮದಲ್ಲಿ ಜೀವಿಯು ಆ ವಿಷಯಗಳನ್ನು ಸ್ವತಃವಾಗಿ ಅನುಭವಿಸಿದರೂ ಜ್ಞಾಪಕಶಕ್ತಿ ಜೀವಿಗೆ ಇಲ್ಲವಾದ್ದರಿಂದ, ಅವು ಜೀವಿಗೆ ತಿಳಿಯದೆ ಹೋಗಿವೆ. ಜೀವಿಗೆ ಜ್ಞಾಪಕವಿಲ್ಲದ ವಿಷಯಗಳನ್ನು ಆತ್ಮ ಶರೀರದಲ್ಲಿನ ಮನಸ್ಸಿಗೆ ತಿಳಿಸದೆ ನೇರವಾಗಿ ಬುದ್ಧಿಗೆ ತಿಳಿಸಿದಾಗ, ಬುದ್ದಿಯಿಂದ ಜೀವಿಗೆ ತಿಳಿಯುತ್ತಿದೆ. ಈ ವಿಧವಾಗಿ ಹಿಂದಿನ ಜನ್ಮ ವಿಷಯಗಳನ್ನು ಅವಶ್ಯಬಂದಾಗ ಆತ್ಮ ಜೀವಿಗೆ ತಿಳಿಯುವಂತೆ ಮಾಡುತ್ತಿದೆ. ಹಾಗೆ ಮಾಡಿದಾಗ ಆತ್ಮ ತಿಳಿಸಿದ ವಿಷಯಗಳು ಮಧ್ಯದಲ್ಲಿ ಬುದ್ಧಿಗೆ ತಿಳಿದರೂ, ಬುದ್ದಿಗೆ ಸಹ ಜ್ಞಾಪಕ ಶಕ್ತಿ ಇಲ್ಲವಾದ್ದರಿಂದ ನಂತರ ಬುದ್ಧಿ ಸಹ ಎಲ್ಲಾ ವಿಷಯಗಳನ್ನು ಮರೆತು ಹೋಗುತ್ತಿದೆ. ಶರೀರದಲ್ಲಿ ಪ್ರಕೃತಿ ಸಂಬಂಧ ಭಾಗಗಳಲ್ಲಿ ಒಂದು ಮನಸ್ಸಿಗೆ ಹೊರತು ಜ್ಞಾಪಕಶಕ್ತಿ

ಯಾವುದಕ್ಕೂ ಇಲ್ಲ. ಮನಸ್ಸಿಗೆ ತಿಳಿಸದೆ ಆತ್ಮವೆ ಒಳಗಿನ ಜೀವಿಗೆ ತಿಳಿಸಿ, ಆತ್ಮವೇ ಸ್ವತಃವಾಗಿ ಕರ್ಮೇಂದ್ರಿಯಗಳಿಂದ ಹೊರಗಡೆ ಹೇಳುವಹಾಗೆ ಮಾಡುತ್ತಿದೆ. ಹೊರಗಿನ ಕರ್ಮೇಂದ್ರಿಯಗಳಿಗು ಸಹ ಆತ್ಮ ಸ್ವತಃವಾಗಿ ತಿಳಿಸುವುದರಿಂದ, ಮನಸ್ಸಿಗೆ ಆ ವಿಷಯಗಳು ಸ್ವಲ್ಪವಾದರೂ ತಿಳಿಯದೇ ಹೋಗುತ್ತಿವೆ. ಶರೀರದಲ್ಲಿ ಆತ್ಮ ಸ್ವತಃವಾಗಿ ಗತಜನ್ಮ ವಿಷಯಗಳನ್ನು ತಿಳಿಸಿದಷ್ಟು ಕಾಲವೇ ಅವುಗಳನ್ನು ಮನುಷ್ಯ ಹೊರಗಡೆ ಹೇಳುತ್ತಿದ್ದಾನೆ. ಯಾವಾಗಾದರೆ ಆತ್ಮ ತಿಳಿಸುವುದನ್ನು ಬಿಟ್ಟುಹಾಕುತ್ತದೋ, ಆಗ ಆ ವಿಷಯಗಳು ಆ ಜೀವಿಗೆ ತಿಳಿಯದೆ ಹೋಗುತ್ತವೆ. ಒಂದು ಸಂವತ್ಸರ ಕಾಲ ಹಿಂದಿನ ಜನ್ಮ ವಿಷಯಗಳನ್ನು ತಿಳಿಸಿದ ಮನುಷ್ಯ ನಂತರ ಏನು ಹೇಳದೆ ಹೋಗುತ್ತಿದ್ದಾನೆ. ಯಾರಾದರು ಆ ವಿಷಯಗಳನ್ನು ಗುರುತುಮಾಡಿದರೂ, ಅವು ಆತನಿಗೆ ಹೊಸ ವಿಷಯಗಳಾಗುತ್ತವೆ. ಆದ್ದರಿಂದ ಸ್ವಲ್ಪಕಾಲ ಹಿಂದಿನ ಜನ್ಮ ಜ್ಞಾಪಕಗಳನ್ನು ಹೇಳಿದವರು, ನಂತರ ಕಾಲದಲ್ಲಿ ಅವುಗಳನ್ನು ಸ್ವಲ್ಪವಾದರೂ ಹೇಳದೆ ಹೋಗುತ್ತಿದ್ದಾರೆ. ಸ್ವಲ್ಪಕಾಲವೇ ಒಬ್ಬನೊಂದಿಗೆ ಗತ ಜನ್ಮದ ಜ್ಞಾಪಕಗಳನ್ನು ಹೇಳಿಸಿದ ಆತ್ಮ, ಗತಜನ್ಮ ನಂತರ ಪುನರ್ಜನ್ಮಗಳಿವೆಯೆಂದು ಎಲ್ಲರೂ ಗುರುತಿಸುವುದಕ್ಕೆ ಮಾತ್ರವೆ ಹಾಗೆ ಮಾಡುತ್ತಿದೆಯೆಂದು ತಿಳಿಯುತ್ತಿದೆ. ಶರೀರದಲ್ಲಿನ ಮನಸ್ಸಿಗೆ ತಿಳಿಯದೆ ಸ್ವತಃವಾಗಿ ಆತ್ಮವೇ ಮಾಡಿದ ಕೆಲಸವಾದ್ದರಿಂದ, ಮನುಷ್ಯನ ಜ್ಞಾಪಕದಲ್ಲಿ ಹಿಂದಿನ ಜನ್ಮ ವಿಷಯಗಳು ಎಂದಿಗೂ ಇರುವುದಿಲ್ಲ.

ಗತ ಜನ್ಮಗಳಿವೆಯೆಂದು, ಗತ ಜನ್ಮಗಳ ನಂತರ ಪುನರ್ಜನ್ಮಗಳಿವೆ ಯೆಂದು ಗುರುತಿಸುವ ನಿಮಿತ್ತವೆ ಆತ್ಮ ಸ್ವತಃವಾಗಿ ತಿಳಿಸುವ ವಿಧಾನವನ್ನು ಇಲ್ಲಿಯವರೆಗು ತಿಳಿದುಕೊಂಡಿದ್ದೇವೆ. ಗತಜನ್ಮಗಳೂ, ಪುನರ್ಜನ್ಮಗಳೂ ಇವೆಯೆಂದು ತಿಳಿದುಕೊಳ್ಳುವುದಕ್ಕೆ ಎರಡು ವಿಧಾನಗಳಿವೆ. ಅದರಲ್ಲಿ ಸ್ವತಃವಾಗಿ ಆತ್ಮ ಒಬ್ಬ ವ್ಯಕ್ತಿಯಿಂದ ತಿಳಿಸುತ್ತದೆಂದು ಹೇಳುವುದು ಒಂದು ವಿಧಾನ. ಎರಡನೆಯ ವಿಧಾನದಲ್ಲಿ ಆತ್ಮ ಹೇಳುವುದಿಲ್ಲ, ಆದರೇ ಮನುಷ್ಯನೇ ಸ್ವತಃವಾಗಿ

ತಿಳಿದುಕೊಳ್ಳುವ ನಿಮಿತ್ತವಾಗಿ, ಶರೀರದ ಮೇಲೆ ಯಾವುದೋ ಒಂದು ಗುರುತು ಇರುವುದು. ಆ ಗುರುತು ಶರೀರ ಹುಟ್ಟಿದಾಗಲೆ ಹುಟ್ಟಿನಿಂದಲೆ ಬಂದಿರುತ್ತದೆ. ಅಂತಹ ಗುರುತನ್ನು ಹುಟ್ಟುಮಚ್ಚೆ ಎನ್ನುತ್ತಾರೆ. ಹುಟ್ಟಿನಿಂದಲೆ ಬಂದ ಮಚ್ಚೆ ಆಗಿರುವುದರಿಂದ ಅದನ್ನು ಹುಟ್ಟುಮಚ್ಚೆ ಎನ್ನುತ್ತಿದ್ದೇವೆ. ಹುಟ್ಟುಮಚ್ಚೆ ಹಿಂದಿನ ಜನ್ಮ ಸಂಬಂಧವನ್ನು ನೆನಪು ಮಾಡುತ್ತಿದೆ. ಉದಾಹರಣೆಗೆ ಕೃಷ್ಣನು ಬಾಲ್ಯದಲ್ಲಿ ಹಾವುಕಡಿತಕ್ಕೆ ಗುರಿ ಆಗಿದ್ದಾನೆ, ಆದುದರಿಂದ ಆತನ ನಂತರ ಜನ್ಮದಲ್ಲಿ ಆ ಹಾವುಕಡಿತ ಶರೀರದ ಮೇಲೆ ಕಚ್ಚಿದ ಜಾಗದಲ್ಲಿ ಹುಟ್ಟುಮಚ್ಚೆಯಾಗಿ ಬಂದಿವೆ. ಈ ವಿಧದಲ್ಲಿ ಗತ ಜನ್ಮಗಳನ್ನು ಒಂದು ಆತ್ಮ ತಿಳಿಸುವ ವಿಧಾನ, ಎರಡು ಜೀವಾತ್ಮ ಸ್ವತಃವಾಗಿ ಗುರುತುಗಳಿಂದ ತಿಳಿಸುವ ವಿಧಾನವು ಎರಡು ವಿಧಗಳು ಇವೆ. ಈ ಎರಡು ವಿಧಾನಗಳನ್ನು ಪ್ರತ್ಯಕ್ಷ ಪ್ರಮಾಣಗಳಿಂದ ತಿಳಿದುಕೊಳ್ಳೋಣ. ಮೊದಲು ಆತ್ಮ ಮೂರನೆ ಕೆಲಸವಾಗಿ ಹಿಂದಿನ ಜನ್ಮದ ವಿಷಯಗಳನ್ನು ತಿಳಿಸುವ ಎರಡು ಮೂರು ವಿಧಾನಗಳನ್ನು ತಿಳಿದುಕೊಳ್ಳೋಣ.

ಈಗ ಮೊದಲ ವಿಧಾನದಲ್ಲಿ ಆತ್ಮ ಗತಜನ್ಮಗಳನ್ನು ತಿಳಿಸಿದ ಯಥಾರ್ಥ ಸಂಘಟನೆಗಳನ್ನು ವಿವರಿಸಿಕೊಳ್ಳೋಣ. 1930ನೇ ವರ್ಷ ಜೂನ್ ಅಥವಾ ಜೂಲೈ ತಿಂಗಳಲ್ಲಿ ಲೆಬನಾನ್ ದೇಶದಲ್ಲಿ "ಹಾಸನ್" ಎನ್ನುವ ಹೆಸರಿರುವ ಸ್ತ್ರೀ ಜನ್ಮಿಸಿದಳು. ಪುನರ್ಜನ್ಮಗಳು ಇಲ್ಲ ಎಂದು ಹೇಳುತ್ತಿರುವ ಇಸ್ಲಾಮ್ ಮತದಲ್ಲಿ ಹಾಸನ್ ಜನ್ಮಿಸಿರುವುದು ವಿಶೇಷ. ಆಕೆಗೆ 20 ವರ್ಷಗಳ ಯುಕ್ತವಯಸ್ಸಿನಲ್ಲಿ "ಫರೂಕ್" ಎಂಬ ವ್ಯಕ್ತಿಯೊಂದಿಗೆ ವಿವಾಹ ನಡೆದಿದೆ. ಫರೂಕ್, ಹಾಸನ್ ಜೋಡಿಗೆ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದ್ದಾರೆ. ಹಾಸನ್‌ಗೆ "ನಭೀ" ಎನ್ನುವ ಸಹೋದರನು ಸಹ ಇರುತ್ತಿದ್ದನು. ಆತನು ಲೆಬನಾನ್ ದೇಶದಲ್ಲಿ ಲೆಬನಾನ್ ಸಮಾಜದಲ್ಲಿ ಬಹಳ ಹೆಸರು ಹೊಂದಿದವನು. ಆದರೆ ನಭಿ ಯುಕ್ತವಯಸ್ಸಿನಲ್ಲಿ ವಿಮಾನ ಅಪಘಾತದಲ್ಲಿ ಮರಣಿಸಿದ್ದಾನೆ. ಹಾಸನ್ ತನ್ನ ಎರಡನೆ ಮಗಳಿಗೆ ಜನ್ಮಕೊಡುವಾಗ ಅನಾರೋಗ್ಯಪಾಲಾಗಿ ಗುಂಡಿಗೆ ಸಮಸ್ಯೆ ಬಂದಿದೆ. ಅದರಿಂದ ಇನ್ನು ಮೇಲೆ ಮಕ್ಕಳನ್ನು ಹೆರಬಾರದೆಂದು

ಡಾಕ್ಟರುಗಳು ಸಲಹೆ ಕೊಟ್ಟಿದ್ದಾರೆ. ಆದರೆ ಹಾಸನ್ ಆ ಸಲಹೆಯನ್ನು ತೆಗೆದುಕೊಳ್ಳದೆ 1962ರಲ್ಲಿ ಮೂರನೆ ಗಂಡು ಮಗುವಿಗೆ ಜನ್ಮಕೊಟ್ಟಿದ್ದಾಳೆ. 1963ರಲ್ಲಿ ತನ್ನ ತಮ್ಮನು ನಭೀ ಸತ್ತುಹೋಗುವುದರಿಂದ ಆಕೆ ಆರೋಗ್ಯ ಮತ್ತೆ ಕ್ಷೀಣಿಸಲು ಆರಂಭವಾಗಿದೆ. ಆಗ ಆಕೆ ತಾನು ಸಾಯುವುದು ಖಂಡಿತವೆಂದುಕೊಂಡಿದ್ದಾಳೆ. ಸ್ವಲ್ಪಕಾಲಕ್ಕೆ 36 ಸಂವತ್ಸರಗಳ ವಯಸ್ಸಿರುವ ಹಾಸನ್ ವರ್ಜಿನಿಯಾದಲ್ಲಿ ಇರುವ "ರಿಚ್‌ಮಡ್" ಎಂಬ ಡಾಕ್ಟರ್ ಹತ್ತಿರಕ್ಕೆ ಗುಂಡಿಗೆ ಆಪರೇಷನ್ ಗೋಸ್ಕರ ಹೋಗಿದ್ದಾಳೆ. ಆಪರೇಷನ್‌ಗೆ ಮೊದಲು ತನ್ನ ದೊಡ್ಡ ಮಗಳು ಲೈಲಾಗೆ ಫೋನ್ ಮಾಡಬೇಕೆಂದುಕೊಂಡಿದ್ದಾಳೆ, ಆದರೆ ಮಾಡಲು ಆಗಲಿಲ್ಲ. ಆಪರೇಷನ್ ನಂತರ ಒಂದುದಿನ ಮಾತ್ರ ಬದುಕಿ ಬಹಳ ಕ್ಲಿಷ್ಟ ಪರಿಸ್ಥಿತಿಯಲ್ಲಿ ಹಾಸನ್ ಮರಣಿಸಿದ್ದಾಳೆ.

ಹಾಸನ್ ಮರಣಿಸಿದ ಹತ್ತು ದಿನಗಳಿಗೆ ಸುಜನ್ನೇಗಾನೆಮ್ ಎನ್ನುವ ಮಗು ಒಂದು ಕುಟುಂಬದಲ್ಲಿ ಹುಟ್ಟಿದೆ. ಸುಜನ್ನೆಗಾನೆಮ್ 16 ತಿಂಗಳ ವಯಸ್ಸಿರುವ ಚಿಕ್ಕ ಮಗುವಾಗಿ ಇದ್ದು ಮಾತುಗಳು ಬಂದು ಬಾರದ ಸಮಯದಲ್ಲಿ ಫೋನ್ ತೆಗೆದುಕೊಂಡು ಹಲೋ ಲೈಲಾ ಎಂದು ಪದೇಪದೇ ಅನ್ನುತ್ತಾ ಇರುತ್ತಿತ್ತು. ಆ ಕುಟುಂಬದವರಿಗಾಗಲಿ, ಸುಜನ್ನೆ ತಾಯಿಗಾಗಲಿ ಲೈಲಾ ಯಾರೋ? ಅಷ್ಟು ಚಿಕ್ಕ ಮಗು ಹಾಗೆ ಏಕೆ ಫೋನ್‌ನಲ್ಲಿ ಕರಿಯುತ್ತಿದ್ದಾಳೋ ಅರ್ಥವಾಗಲಿಲ್ಲ. ನಂತರ ಆರು ತಿಂಗಳುಗಳು ಕಳೆದ ಸುಜನ್ನೆಗೆ ಎರಡು ಸಂವತ್ಸರಗಳು ವಯಸ್ಸು ಪೂರ್ತಿ ಆಗಿದೆ. ಆಗ ಮಾತುಗಳು ಸಹ ಚೆನ್ನಾಗಿ ಬಂದಿವೆ. ಆಗ ಆಕೆಯ ತಾಯಿ ಲೈಲಾ ಯಾರು ಎಂದು ಕೇಳಿದಳು. ಅದಕ್ಕೆ ಸುಜನ್ನೆಗಾನೆಮ್ ನನಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆಂದು ಅವರಲ್ಲಿ ಒಬ್ಬ ಮಗಳ ಹೆಸರು ಲೈಲಾ ಎಂದು ಹೇಳಿದಳು. ಅಷ್ಟೇ ಅಲ್ಲದೆ ತನ್ನ ಹೆಸರು ಸುಜನ್ನೆ ಅಲ್ಲವೆಂದು, ತನ್ನ ಹೆಸರು ಹಾಸನ್ ಎಂದು, ತನ್ನ ಗಂಡನ ಹೆಸರು ಫರೂಕ್ ಎಂದು, ತನ್ನ ತಾಯಿತಂದೆಯರ ಹೆಸರುಗಳು, ತಮ್ಮಂದಿರ ಹೆಸರುಗಳು, ಉಳಿದ ಕುಟುಂಬ ಸದಸ್ಯರ ಹೆಸರುಗಳು ಒಟ್ಟು 13 ಹೆಸರುಗಳು ಕ್ರಮವಾಗಿ

ಹೇಳಿದಳು. ಇನ್ನು ತನ್ನ ಊರಿನ ವಿವರಗಳು ಕೇಳಿದರೆ ಈಗ ನನ್ನ ತಲೆ ಚಿಕ್ಕದು ಇನ್ನು ಸ್ವಲ್ಪ ಕಾಲಕ್ಕೆ ಎಲ್ಲ ವಿಷಯಗಳು ಹೇಳುತ್ತೇನೆಂದು ಹೇಳಿದ್ದಾಳೆ.

ಈ ವಿಧವಾಗಿ ಸುಜನ್ನೆ ಹೇಳಿದ ಮಾತುಗಳನ್ನು ಕೇಳಿ ಆಕೆಯ ಕುಟುಂಬದಲ್ಲಿರುವವರು ಸುಜನ್ನೆ ಹಿಂದಿನ ಜನ್ಮದಲ್ಲಿ ಹಾಸನ್ ಆಗಿ ಎಲ್ಲಿ ಹುಟ್ಟಿದ್ದಳೊ ತಿಳಿದುಕೊಳ್ಳಬೇಕೆಂದುಕೊಂಡರು. ಆ ವಾರ್ತೆಯನ್ನು ಪತ್ರಿಕೆಗಳಿಂದ ಹೊರಗಡೆ ತಿಳಿಸಿದರು. ಆಗ ಹಾಸನ್ ಕುಟುಂಬದವರು, ಹಾಸನ್ ಗಂಡ ಫರೂಕ್ ಸುಜನ್ನೆಯನ್ನು ನೋಡುವುದಕ್ಕೆ ಬಂದಿದ್ದಾರೆ. ಮೊದಲು ಫರೂಕ್ ಕುಟುಂಬದವರು ಚಿಕ್ಕಮಗುವಾಗಿರುವ ಸುಜನ್ನೆ ಹೇಳುವ ಮಾತುಗಳನ್ನು ನಂಬದೆ ಹೋಗಿದ್ದಾರೆ. ಹಾಸನ್ ಬಂಧುಗಳನ್ನು ಸರಿಯಾಗಿ ಅವರ ಹೆಸರುಗಳಿಂದ ಸುಜನ್ನೆ ಕರೆಯುವುದರಿಂದ ಫರೂಕ್ ಕುಟುಂಬದವರು ಆ ಹುಡುಗಿಯನ್ನು ನಂಬುತ್ತಾರೆ. ಹಾಸನ್ ತನ್ನ ಒಡವೆಗಳನ್ನು, ಇತರೆ ಆಭರಣಗಳನ್ನು ವರ್ಜಿನಿಯಾದಲ್ಲಿನ ತನ್ನ ತಮ್ಮ ಹೆರ್‌ಕುಲೇಗೆ ಕೊಟ್ಟಿದ್ದಾಳೆ. ಇದು ಸರ್ಜರಿಗೆ ಮೊದಲು ನಡೆದ ಕಥೆ. ಆ ಒಡವೆಗಳನ್ನು ಹೆರ್‌ಕುಲೇಗೆ ಕೊಡುತ್ತಾ, ಇವುಗಳನ್ನು ತನ್ನ ಮಕ್ಕಳಿಗೆ ಕೊಡಬೇಕೆಂದು ಹೇಳಿದಳು. ಈ ವಿಷಯ ಹಾಸನ್‌ಗು ಅವರ ಕುಟುಂಬದವರಿಗು ಅಲ್ಲದೆ ಇನ್ಯಾರಿಗು ತಿಳಿದಿಲ್ಲ. ಇವೆಲ್ಲವನ್ನು ಕೇಳಿದ ನಂತರ ಸುಜನ್ನೇ ಗತಜನ್ಮದಲ್ಲಿ ಹಾಸನ್ ಆಗಿ ಇದ್ದಳೆಂದು ದೃಢೀಕರಿಸಲಾಗಿದೆ.

ಓದುವುದಕ್ಕಾಗಲಿ, ಬರೆಯುವುದಕ್ಕಾಗಲಿ ಬಾರದ ಮುನ್ನ ಸುಜನ್ನೆ ಪೇಪರ್ ಮೇಲೆ ಯಾವೋ ನಂಬರ್‌ಗಳು ಬರೆಯುತ್ತಿದ್ದಳು. ನಂತರ ಆ ನಂಬರ್‌ಗಳು ಫರೂಕ್ ಮನೆಯ ಫೋನ್ ನಂಬರ್‌ಗಳೆಂದು ತಿಳಿದಿದೆ. ಸುಜನ್ನೆಗೆ ಐದು ಸಂವತ್ಸರಗಳ ವಯಸ್ಸಿರುವಾಗಲೆ ದಿನಕ್ಕೆ ಮೂರು ಸಲ ಫರೂಕ್‌ಗೆ ಫೋನ್ ಮಾಡುತ್ತಿದ್ದಳು. ಫರೂಕ್‌ನನ್ನು ಬೇಟಿಯಾದಾಗ ಸುಜನ್ನೆ ಆತನ ಮಡಿಲಲ್ಲಿ ಕುಳಿತುಕೊಂಡು ನಿದ್ರಿಸುತ್ತಿದ್ದಳು. ಪೊಲೀಸ್ ಉದ್ಯೋಗ ಮಾಡುವ ಫರೂಕ್, ಮರಣಿಸಿದ ತನ್ನ ಹೆಂಡತಿ ಹಾಸನ್ ಸುಜನ್ನೆಯಾಗಿ ಜನ್ಮಿಸಿದ್ದಾಳೆಂದು

ಅಂಗೀಕರಿಸಿದನು. ಸುಜನ್ನೆಗೆ ಯಾವುದಾದರು ಫೋಟೋಗಳು ತೋರಿಸಿದರೆ ಅವುಗಳಲ್ಲಿನ ವ್ಯಕ್ತಿಗಳನ್ನು ಗುರುತಿಸುವುದೆ ಅಲ್ಲದೆ, ಹಾಸನ್‌ಗೆ ಆ ಫೋಟೋದಲ್ಲಿರುವವರ ಸಂಬಂಧವನ್ನು ಸುಜನ್ನೆ ವಿವರಿಸುತ್ತಿದ್ದಳು. ಕೆಲವು ಹಾಸನ್‌ಗೆ ಅಲ್ಲದೆ ಯಾರಿಗು ತಿಳಿಯದ ವಿವರಗಳನ್ನು ಸುಜನ್ನೆ ವಿವರಿಸುತ್ತಿದ್ದಳು. ಇದರಿಂದ ಹೋದ ಜನ್ಮದಲ್ಲಿನ ಹಾಸನ್ ಈ ಜನ್ಮದಲ್ಲಿ ಸುಜನ್ನೆಯಾಗಿ ಹುಟ್ಟಿರುವುದೆಂದು ಪೂರ್ತಿ ನಿರೂಪಣೆಗೆ ಬಂದಿದೆ. ಈ ವಿಷಯದಿಂದ ಪುನರ್ಜನ್ಮ ಇದೆಯೆಂದು ನಿರೂಪಣೆಗೆ ಬಂದಿದೆ. 40 ಸಂವತ್ಸರಗಳ ಕೆಳಗೆ ನಡೆದ ಈ ಸಂಘಟನೆಯನ್ನು ಯಾರೂ ಅಲ್ಲಗಳೆಯುವುದಿಲ್ಲ ಮತ್ತು ಖಂಡಿಸುವುದೂ ಇಲ್ಲ.

ಜೀವಿಯು ಶರೀರವನ್ನು ಬಿಟ್ಟು ಹೋಗುವುದು ಮರಣವಾದರೆ, ಅದೇ ಜೀವಿಯು ಮತ್ತೊಂದು ಶರೀರವನ್ನು ಧರಿಸುವುದು ಜನ್ಮ ಆಗುತ್ತದೆ. ಅದನ್ನೇ ಆಳವಾಗಿ ವಿಚಾರಿಸಿದರೆ ಪುನರ್ಜನ್ಮ ಆಗುತ್ತದೆ. ಒಬ್ಬ ಮನುಷ್ಯ ಹಳೆ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದರೆ ಅದನ್ನು ವಸ್ತ್ರ ಮಾರ್ಪಾಟು ಎನ್ನಬಹುದು. ಹಾಗೆಯೇ ಒಬ್ಬ ಜೀವಿಯು ಹಳೆ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸಿದರೆ ಅದನ್ನು ಶರೀರ ಮಾರ್ಪಾಟು ಎನ್ನಬಹುದು. ಶರೀರ ಮಾರ್ಪಾಟಿನಲ್ಲಿ ಜೀವಿಗೆ ಪುನರ್ಜನ್ಮ ಏರ್ಪಡುತ್ತದೆ. ಮನುಷ್ಯ ಪುನರ್ಜನ್ಮ ಹೊಂದಿದಾಗ, ಹಿಂದಿನ ಜನ್ಮ ಜ್ಞಾಪಕಗಳು ಆತನಿಗೆ ಇಲ್ಲದೆ ಹೋಗುವುದರಿಂದ, ಅದನ್ನು ಜನ್ಮ ಎಂದುಕೊಳ್ಳುವುದು ನಡೆಯುತ್ತದೆ. ಆದರೆ ಅದು ತನಗೆ ಪುನರ್ಜನ್ಮ ಎಂದು ಯಾರಿಗು ತಿಳಿಯದೆ ಹೋಗುತ್ತಿದೆ. ಹಾಗೆ ತಿಳಿಯದೆ ಹೋಗುವುದರಿಂದ ನಡೆಯುತ್ತಿರುವ ಸತ್ಯವು ಸಮಾಧಿಯಾಗಿ ಹೋಗುತ್ತದೆ. ಆದ್ದರಿಂದ ಜೀವಿಗೆ ಜನ್ಮದಲ್ಲಿ ನಡೆಯುವ ಸತ್ಯವನ್ನು ತಿಳಿಸುವ ನಿಮಿತ್ತ, ಜೀವಿಯೊಂದಿಗೆ ಶರೀರದಲ್ಲಿರುವ ಆತ್ಮ ಆಗಾಗ ಎಲ್ಲೋ ಒಂದುಕಡೆ, ಹಿಂದಿನ ಜನ್ಮ ಜ್ಞಾಪಕವನ್ನು ಒದಗಿಸುತ್ತದೆ. ಹಿಂದಿನ ಜನ್ಮ ಜ್ಞಾಪಕದಿಂದ ಪುನರ್ಜನ್ಮ ನಿರೂಪಣೆಗೆ ಬರುತ್ತಿದೆ. ಮನುಷ್ಯ ಜೀವನದಲ್ಲಿನ ಆಧ್ಯಾತ್ಮಿಕ ವಿಷಯಗಳನ್ನು ದೇವರು ತನ್ನ ಪ್ರವಕ್ತರಿಂದ ಹೇಳಿಸಿದ್ದಾನೆ. ಹಾಗೆ ಹೇಳಿಸಿರುವವುಗಳಲ್ಲಿ ಜನ್ಮ, ಪುನರ್ಜನ್ಮ ವಿಷಯಗಳು

ಮುಖ್ಯವಾಗಿ ತಿಳಿದು ಬಂದಿವೆ. ದೇವರು ಭೂಮಿಮೇಲೆ ಮನುಷ್ಯನಿಗಾಗಿ ಕೆಲವು ಸಾವಿರ ಸಂವತ್ಸರಗಳಿಗೊಂದುಸಲ ಬಂದು ತನ್ನ ಜ್ಞಾನವನ್ನು ಮತ್ತೆ ಮತ್ತೆ ಹೇಳುವುದು ನಡೆದಿದೆ. ಮನುಷ್ಯ ತನ್ನ ಜ್ಞಾನವನ್ನು ಮರೆತು ಹೋಗದಂತಿರುವುದಕ್ಕೆ ದೇವರು ಎಷ್ಟುಸಲ ತನ್ನ ಜ್ಞಾನವನ್ನು ಮನುಷ್ಯರಿಗೆ ಹೇಳಿದರೆ, ಅಷ್ಟುಸಲ ಮನುಷ್ಯ ದೇವರ ಜ್ಞಾನವನ್ನು ಅರ್ಥಮಾಡಿಕೊಳ್ಳದೆ, ಒಂದೊಂದುಸಲ ಹೇಳಿರುವುದನ್ನು ಒಂದೊಂದು ಮತವಾಗಿ, ಹೇಳಿರುವವನನ್ನು ಮತಪ್ರವಕ್ತನೆಂದು ಹೇಳಿಕೊಂಡಿದ್ದಾರೆ. ಆದ್ದರಿಂದ ದೇವರು ಹೇಳಿರುವುದು ಒಂದೇ ಜ್ಞಾನವಾದರೂ ಅದು ಹೇಳಿದ ಜಾಗ ಬೇರೆ, ಹೇಳಿದ ಕಾಲ ಬೇರೆ, ಹೇಳಿದ ಮನುಷ್ಯ ಬೇರೆ. ಆದರೆ ದೇವರು ಹೇಳಿರುವುದು ಒಂದೇ ಜ್ಞಾನವೆಂದು ತಿಳಿಯದೆ ನಮ್ಮ ಮತದಲ್ಲಿ ಹೇಳಿರುವುದು ಬೇರೆ, ನಿಮ್ಮ ಮತದಲ್ಲಿ ಹೇಳಿರುವುದು ಬೇರೆಯೆಂದುಕೊಳ್ಳುವುದು ನಡೆದಿದೆ. ದೇವರು ಸತ್ಯವಂತನು, ಸತ್ಯವನ್ನೇ ತಿಳಿಸುತ್ತಾನೆ. ಮನುಷ್ಯ ದೇವರು ಹೇಳಿದ ಸತ್ಯವನ್ನು ಅರ್ಥ ಮಾಡಿಕೊಳ್ಳದೆ, ಒಂದೊಂದು ಸಲ ಒಂದೊಂದು ವಿಧವಾಗಿ ಹೇಳಿದ ಹಾಗೆ ಅರ್ಥಮಾಡಿ ಕೊಂಡು, ದೇವರ ಸತ್ಯವನ್ನೇ ತನಗೆ ತಿಳಿಯದ ಹಾಗೆ ಅಸತ್ಯವಾಗಿ ಮಾಡುತ್ತಿದ್ದಾನೆ. ಹಾಗೆ ದೇವರು ಹೇಳಿದ ಮಾತನ್ನು ನಾನು ಅಸತ್ಯಮಾಡಿ ಮಾತನಾಡುತ್ತಿದ್ದೇನೆಂದು ತಿಳಿಯದೆ ಹೋಗುವುದಲ್ಲದೆ, ತನಗೆ ತಿಳಿದಿರುವುದೆ ಸತ್ಯವೆಂದು, ನೂರಕ್ಕೆ ನೂರಷ್ಟು ನಂಬಿಕೆಯಿಂದ ಇದ್ದಾನೆ. ಅಂತಹ ವಿಶ್ವಾಸದಿಂದಲೆ ಕೆಲವರು ಪುನರ್ಜನ್ಮಗಳು ಇವೆಯೆಂದರೆ, ಕೆಲವರು ಪುನರ್ಜನ್ಮಗಳು ಇಲ್ಲ ಎನ್ನುತ್ತಿದ್ದಾರೆ. ಈ ವಿಧವಾಗಿ ಇವೆಯೆಂದು ಕೆಲವು ಮತದವರೂ, ಇಲ್ಲವೆಂದು ಕೆಲವು ಮತದವರು ಹೇಳುತ್ತಿರುವಾಗ, ಸಾಮಾನ್ಯ ಮನುಷ್ಯ ಯಾವುದನ್ನು ಸತ್ಯವೆಂದು ನಂಬಬೇಕೊ, ಯಾವುದನ್ನು ನಂಬಬಾರದೊ ತಿಳಿದುಕೊಳ್ಳದೆ ಹೋಗುವನು. ಅಂತಹ ಸಿಕ್ಕು ಸಮಸ್ಯೆ ಏರ್ಪಡದ ಹಾಗೆ, ಯಾವುದು ಸತ್ಯವೊ ಎಲ್ಲರು ತಿಳಿಯುವುದಕ್ಕು, ಎಲ್ಲಾ ಮತದವರು ಸತ್ಯವನ್ನು ತಿಳಿದುಕೊಳ್ಳುವುದಕ್ಕು ದೇವರು ತನ್ನ ಜ್ಞಾನವನ್ನು ಅನುಭವರೀತ್ಯ ಅರ್ಥವಾಗುವಹಾಗೆ ಮಾಡುವನು. ಅಂತಹ ಪ್ರಕ್ರಿಯದಲ್ಲಿನ ಭಾಗವೇ ಮೇಲೆ ಹೇಳಿದ ಹಾಸನ್ ಪುನರ್ಜನ್ಮ ಸಂಘಟನೆ.

ದೇವರು ತಾನು ಹೇಳಿರುವುದು ಸತ್ಯವೆಂದು, ಒಂದುವೇಳೆ ಯಾರಾದರು ಆತನ ಮಾತನ್ನು ತಪ್ಪಾಗಿ ಅರ್ಥ ಮಾಡಿಕೊಂಡಿದ್ದರೆ ಮೀರಿ ಹೋಗಿರುವುದು ಏನು ಇಲ್ಲವೆಂದು, ಅಂತಹವರು ನಡೆದ ಯಥಾರ್ಥವನ್ನು ಅನುಸರಿಸಿ ತಾವು ತಪ್ಪಾಗಿ ಅರ್ಥೈಸಿಕೊಂಡ ವಿಷಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳ ಬಹುದೆಂದು, ಅಲ್ಲಿಗೂ ಅವರಿಗೆ ಅರ್ಥವಾಗದೆ ಹೋದರೆ, ಅವರ ಹತ್ತಿರ ಇರುವುದು ಮತ ಜ್ಞಾನವೇ ಎಂದು, ದೇವರ ಜ್ಞಾನ ಅಲ್ಲವೆಂದು ಹೇಳಬಹುದು. ದೇವರು ಸರ್ವವನ್ನು ಸೃಷ್ಠಿಸಿದ ನಂತರ ತನ್ನ ಧರ್ಮಗಳನ್ನು ಮನುಷ್ಯನಿಗೆ ತಿಳಿಸಿದ್ದಾನೆ. ಅದರಲ್ಲಿ ತಿರುಗಿ ಮನುಷ್ಯ ತನ್ನ ಹತ್ತಿರಕ್ಕೆ (ದೇವರ ಹತ್ತಿರಕ್ಕೆ) ಬಾರದವರೆಗು ಭೂಮಿಮೇಲೆ ಸಾಯುತ್ತಾ, ಹುಟ್ಟುತ್ತಾ ಸುಖದುಃಖಗಳನ್ನು ಅನುಭವಿಸುತ್ತಾ ಇರಬೇಕಾಗಿರುವುದೆ ಎಂದು, ತನ್ನ ಹತ್ತಿರಕ್ಕೆ ಬಂದವನಿಗೆ ಮಾತ್ರವೆ ಜನನ ಮರಣಗಳಿಂದ ಮುಕ್ತಿ ಲಭಿಸುವುದೆಂದು, ಅದನ್ನೇ ಮೋಕ್ಷ ಎನ್ನುತ್ತೇವೆಂದು ಹೇಳಿದ್ದಾನೆ. ಅದೇ ವಿಷಯವನ್ನೇ ಎಲ್ಲಾ ಮತಗಳಲ್ಲಿಯೂ ಹೇಳಿದ್ದಾನೆ. ಆದರೆ ಇಸ್ಲಾಮ್ ಮತದಲ್ಲಿ ಚಿಕ್ಕ ಅವಗಾಹನೆಯ ಲೋಪದಿಂದ ಪ್ರವಕ್ತ ಹೇಳಿದ ಸತ್ಯವನ್ನು ಕೆಲವರು ಅರ್ಥಮಾಡಿಕೊಳ್ಳದೆ ಹೋಗಿದ್ದಾರೆ. ದೇವರ ಜ್ಞಾನ ದೊಡ್ಡದಾಗಿರುವುದರಿಂದ ಯಾರಾದರೂ ತಪ್ಪಾಗಿ ಅರ್ಥೈಸಿಕೊಳ್ಳುವುದಕ್ಕೆ ಅವಕಾಶವಿದೆ. ಪ್ರವಕ್ತ ಬದುಕಿರುವಾಗಲೆ ಮುಹಮ್ಮದ್ ಪ್ರವಕ್ತರ ನಾಲ್ಕುಜನ ಹೆಂಡತಿಯರಲ್ಲಿ ಚಿಕ್ಕ ಹೆಂಡತಿಗೆ ಪುನರ್ಜನ್ಮಗಳ ವಿಷಯ ಅರ್ಥವಾಗದೆ ತಿರುಗಿ ಪ್ರವಕ್ತನನ್ನು ಕೇಳಿ ತಿಳಿದುಕೊಂಡಿದ್ದಾಳೆ. ಈ ದಿನ ಪ್ರವಕ್ತ ಇಲ್ಲವಾದ್ದರಿಂದ ಅಂತಹ ಅವಕಾಶ ನಮಗಿಲ್ಲ. ಆದ್ದರಿಂದ ನಡೆದ ಯಥಾರ್ಥವನ್ನು ಅನುಸರಿಸಿ ನಮ್ಮ ತಪ್ಪನ್ನು ಸರಿಮಾಡಿಕೊಳ್ಳಬಹುದು. ಮುಹಮ್ಮದ್ ಪ್ರವಕ್ತರು ತನ್ನ ಸತಿಮಣಿಯರ ಹತ್ತಿರ ದೇವರ ಧರ್ಮಗಳನ್ನು ತಿಳಿಸುತ್ತಾ ಸತ್ತುಹೋದ ಮನುಷ್ಯನನ್ನು ಪ್ರಳಯ ದಿನದಂದು ದೇವರು ಸಮಾಧಿಯಿಂದ ಪುನಃ ಎಬ್ಬಿಸುವನೆಂದು, ಆಗ ಮನುಷ್ಯ ಅವೇ ಮೂಳೆಗಳು, ಅದೇ ಚರ್ಮದಿಂದ, ಅದೇ ಶರೀರದಿಂದ ತಿರುಗಿ ಸಮಾಧಿಯಿಂದ ಬರುವುದೆಂದು, ಹಾಗೆ ಬಂದಿರುವವನ ಶರೀರದ ಮೇಲೆ ನೂಲಿನ ಎಳೆ ಸಹ

ಇರುವುದಿಲ್ಲವೆಂದು ತಿಳಿಸಿದ್ದಾನೆ. ಆಗ ಪ್ರವಕ್ತರ ಚಿಕ್ಕ ಹೆಂಡತಿ ಹೀಗೆ ಕೇಳಿದಳು. "ನಾವು ಸ್ತ್ರೀಯರು ತಾನೆ! ದೇವರು ನಮ್ಮನ್ನು ಬಟ್ಟೆಗಳು ಇಲ್ಲದೆ ನಗ್ನವಾಗಿ ಎಬ್ಬಿಸಿದರೆ ನಮಗೆ ಮರ್ಯಾದೆ ಹೋಗುತ್ತದೆ ಅಲ್ಲವೆ! ನಮಗೆ ಮಾನ ಹೋಗುತ್ತದೆ ಅವಮಾನ ಏರ್ಪಡುತ್ತದೆ ತಾನೆ! ಎಂದು ಕೇಳಿದಳು. ಆಗ ಪ್ರವಕ್ತ ಹೀಗೆ ಹೇಳಿದನು. "ದೇವರು ಮನುಷ್ಯನನ್ನು ಪುನಃ ಸಮಾಧಿಯಿಂದ ಎಬ್ಬಿಸಿದಾಗ ಸ್ತ್ರೀಯರಿಗಾಗಲಿ, ಪುರುಷರಿಗಾಗಗಲಿ ಎಂತಹ ಪ್ರಪಂಚ ಜ್ಞಾಪಕವಾಗಲಿ ಇರುವುದಿಲ್ಲ." ಎನ್ನುತ್ತಾನೆ. ಪ್ರಳಯ ಕಾಲದಲ್ಲಿ ಸತ್ತುಹೋದ ವರೆಲ್ಲರು ಸಮಾಧಿಗಳಿಂದ ಏಬ್ಬಿಸಲ್ಪಡುತ್ತಾರೆಂದು ಪವಿತ್ರ ಗ್ರಂಥವಾದ ಖುರಾನ್‌ನಲ್ಲಿ ಸಹ ಅನೇಕ ಕಡೆ ಪ್ರವಕ್ತ ಹೇಳಿದ್ದಾನೆ. ಈ ವಿಷಯದಲ್ಲಿ ಪ್ರವಕ್ತಗೆ ಹತ್ತಿರದಲ್ಲಿರುವ ಆತನ ಹೆಂಡತಿಯೆ ತಪ್ಪಾಗಿ ತಿಳಿದಿದ್ದರಿಂದ ಪ್ರವಕ್ತ ಆಕೆಗೆ ಇನ್ನು ಸ್ವಲ್ಪ ವಿವರವಾಗಿ ಹೇಳುತ್ತಾನೆ. ಆ ವಿವರದಿಂದ ಮನುಷ್ಯನಿಗೆ ಪುನರ್ಜನ್ಮಗಳಿವೆಯೆಂದು ಯಾರಿಗಾದರೂ ಅರ್ಥವಾಗುತ್ತದೆ. ಆದರೆ ಕೆಲವರಿಗೆ ಪ್ರವಕ್ತನ ಮಾತುಗಳು ಪುನರ್ಜನ್ಮಗಳು ಇಲ್ಲವೆಂದೇ ಅರ್ಥವಾಗುವುದಕ್ಕೆ ಕಾರಣಗಳು ಇವೆ. ಅವು ಏನೆಂದರೆ! ಸಮಾಧಿ ಎಂದರೆ ಏನೋ ಕೆಲವರಿಗೆ ಅರ್ಥವಾಗಿಲ್ಲ. ದೇವರು ಸತ್ತುಹೋದ ಮನುಷ್ಯನನ್ನು ಪುನಃ ಎಬ್ಬಿಸಿದಾಗ ಆ ಮನುಷ್ಯನಿಗೆ ಎಷ್ಟು ವಯಸ್ಸು? ಎಂದು ಕೇಳಿದರೆ ಸಮಾಧಾನವಿಲ್ಲ. ಮನುಷ್ಯ ಎಷ್ಟುಕಾಲ ಸಮಾಧಿಯಲ್ಲಿ ಇರುತ್ತಾನೆ ಎಂದು ಪ್ರಶ್ನಿಸಿದರೆ ಉತ್ತರವಿಲ್ಲ. ನೀನು ಅಂದುಕೊಂಡಿರುವ ಸಮಾಧಿ ನಿನ್ನದಾ ಅಥವಾ ನಿನ್ನ ಶರೀರದ್ದಾ? ಎಂದು ಕೇಳಿದರೆ ಅದಕ್ಕೆ ಸರಿಯಾಗಿ ಏನು ಹೇಳಬೇಕೋ ಬಹಳ ಜನರಿಗೆ ತಿಳಿದಿಲ್ಲ. ನೀರಿನಲ್ಲಿ ಮುಳುಗಿ ಹೋದವನಿಗೆ ಸಮಾಧಿ ಇದೆಯಾ? ಅಗ್ನಿಯಲ್ಲಿ ಸುಟ್ಟುಹೋದವನಿಗೆ ಸಮಾಧಿ ಎಲ್ಲಿದೆ ಎಂದು ಕೇಳಿದರೆ ಸರಿಯಾದ ಸಮಾಧಾನ ಇರುವುದಿಲ್ಲ. ಇಷ್ಟು ಪ್ರಶ್ನೆಗಳಿಗೆ ಸರಿಯಾದ ಉತ್ತರ ದೊರಕಿದಾಗ, ದೇವರು ಹೇಳಿದ ಜ್ಞಾನ ನಮಗೆ ಅರ್ಥವಾಗಿದೆಯೆಂದು, ಇಲ್ಲದೆ ಹೋದರೆ ಅರ್ಥವಾಗಿಲ್ಲವೆಂದೇ ತಿಳಿದುಕೊಳ್ಳಬೇಕು.

ಸೃಷ್ಟಿಕರ್ತನಾದ ದೇವರು ತನ್ನ ಪವಿತ್ರ ಗ್ರಂಥವಾದ ಖುರಾನ್‌ನಲ್ಲಿ, ಪರಿಶುದ್ಧ ಬೈಬಲ್‌ನಲ್ಲಿ, ಉತ್ತಮವಾದ ಭಗವದ್ಗೀತೆಯಲ್ಲೂ ಜನನ ಮರಣ ವಿಷಯದಲ್ಲಿ ಒಂದೇ ಧರ್ಮವನ್ನು ಬೋಧಿಸಿದ್ದಾನೆ. ಗೀತೆಯಲ್ಲಿ ಹೇಳಿದ ಮಾತಿಗಾಗಲಿ, ಬೈಬಲ್‌ನಲ್ಲಿ ಹೇಳಿದ ಮಾತಿಗಾಗಲಿ, ಖುರಾನ್‌ನಲ್ಲಿ ಹೇಳಿದ ಮಾತಿಗಾಗಲಿ ಎಲ್ಲಿಯೂ ವ್ಯತ್ಯಾಸ ಇಲ್ಲ. ಆದರೆ ನಾವು ಅರ್ಥ ಮಾಡಿಕೊಳ್ಳುವು ದರಲ್ಲಿ ಎಷ್ಟೋ ವ್ಯತ್ಯಾಸ ಬಂದಿದೆ. ಆದ್ದರಿಂದ ನೀವು ಚೆನ್ನಾಗಿ ಆಲೋಚಿ ಸಿಕೊಳ್ಳಬೇಕೆಂದು ದೇವರು ಎಚ್ಚರಿಕೆ ಮಾಡಿ ಹೇಳಿದ್ದಾನೆ. ಅಂತಹ ಮಾತನ್ನು ಖುರಾನ್‌ನಲ್ಲಿ ಒಂದು ಕಡೆ ನೋಡಬಹುದು. ಅಜ್‌ಜುಮತ್ (ಬೃಂದಗಳು) ಎನ್ನುವ 39ನೇ ಸುರಾದಲ್ಲಿ 42ನೇ ಆಯತ್‌ನಲ್ಲಿ ಹೀಗಿದೆ. "ಅಲ್ಲಾನೆ ಆತ್ಮಗಳನ್ನು (ಪ್ರಾಣಗಳನ್ನು) ಮರಣ ಕಾಲದಲ್ಲಿ ವಶಪಡಿಸಿಕೊಳ್ಳುವ ವನು. ಮರಣಿಸಿದವನ ಆತ್ಮಗಳಿಗೆ ಯಾವುದಕ್ಕಾದರೆ ಮರಣ ನಿರ್ಣ ಯಿಸಲ್ಪಡುತ್ತದೊ ಅದನ್ನು ತನ್ನ ಹತ್ತಿರವೆ ನಿಲ್ಲಿಸಿಕೊಂಡು, ಉಳಿದವರ ಆತ್ಮಗಳನ್ನು ನಿರ್ಣೀತ ಸಮಯದವರೆಗು ತಿರುಗಿ ಕಳುಹಿಸುವನು. ಇದರಲ್ಲಿ ಆಲೋಚಿ ಸುವವರಿಗೆ ದೊಡ್ಡ ಸೂಚನೆಗಳಿವೆ". ಈ ಆಯತ್ ಯಾರನ್ನಾದರೂ ಎಷ್ಟೋ ಆಲೋಚಿಸುವಂತೆ ಮಾಡುತ್ತದೆ. ಉಳಿದ ಪ್ರಾಣಿಗಳನ್ನು ತಿರುಗಿ ಕಳುಹಿಸುತ್ತೇನೆ ಎಂದಾಗ ಎಲ್ಲಿಂದ ಎಲ್ಲಿಗೆ ಕಳುಹಿಸುತ್ತಾನೆಂದು ಪ್ರಶ್ನೆ ಹಾಕಿಕೊಂಡು ನೋಡಬೇಕಾದ ಅವಶ್ಯವಿದೆ. ಅಷ್ಟೇ ಅಲ್ಲದೆ ಸ್ವತಃವಾಗಿ ದೇವರೇ ಇದರಲ್ಲಿ ಆಲೋಚಿಸುವವರಿಗೆ ದೊಡ್ಡ ಸೂಚನೆಗಳಿವೆಯೆಂದು ಹೇಳಿದಾಗ ಮನುಷ್ಯ ಎಷ್ಟೋ ಆಲೋಚಿಸಬೇಕಾದ ಅವಶ್ಯವಿದೆಯೆಂದು, ನಾವು ಯಾವುದೊ ತಪ್ಪು ಮಾಡುತ್ತಿದ್ದೇವೆಂದು, ಅದಕ್ಕೇ ದೇವರು ಹಾಗೆ ಹೇಳಿದ್ದಾನೆಂದು ಅರ್ಥ ಮಾಡಿಕೊಳ್ಳಬಹುದು.

ಇದಕ್ಕೆ ಅನುಸಂಧಾನವಾಗಿ ಪವಿತ್ರ ಖುರಾನ್‌ನಲ್ಲಿ ಸೃಷ್ಠಿಕರ್ತ ಆದ ದೇವರು ಮತ್ತೊಂದು ಮಾತನ್ನು ಸಹ ಹೇಳಿದ್ದಾನೆ. 53ನೆ ಸುರಾ ಅನ್‌ನಜ್ಮ್ (ನಕ್ಷತ್ರ) 44,45,46 ಆಯತ್‌ಗಳಲ್ಲಿ 44) ನಿಶ್ಚಯವಾಗಿ ಆತನೇ ಮರಣಿಸುವಂತೆ ಮಾಡುವವನು ಮತ್ತು ಜೀವನವನ್ನು ಪ್ರಸಾದಿಸುವವನು. 45) ನಿಶ್ಚಯವಾಗಿ

ಹೆಣ್ಣು, ಗಂಡು ಜೋಡಿಗಳನ್ನು ಸೃಷ್ಟಿಸಿದವನು ಆತನೆ, 46) ಪ್ರವಹಿಸುವಂತೆ ಮಾಡಿದ ವೀರ್ಯಬಿಂದುವಿನಿಂದ ಮತ್ತೊಂದು ಜೀವನವನ್ನು ಪ್ರಸಾದಿಸುವುದು ಆತನಿಗೆ (ದೇವರಿಗೆ) ಸಲ್ಲುತ್ತದೆ. ಈ ವಿಧವಾಗಿ ಖುರಾನ್‌ನಲ್ಲಿ ಮತ್ತೆ ಕೆಲವು ವಾಕ್ಯಗಳು ಕಾಣಿಸಬಹುದು. ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಂಡಾಗ ಮೇಲೆ ಹೇಳಿಕೊಂಡ ಹಾಸನ್ 36 ಸಂವತ್ಸರಗಳಿಗೆ ಮರಣಿಸಿ ಪುನಃ ಹತ್ತು ದಿನಗಳಿಗೆ ಸುಜನ್ನೆಯಾಗಿ ಜನ್ಮಿಸಿದ ಸತ್ಯವು ಅರ್ಥವಾಗಬಹುದು. ಹಾಸನ್ ಮರಣಿಸಿ ಮತ್ತೆ ಹುಟ್ಟಿರುವುದು ಸತ್ಯವಾದಾಗ ಪುನರ್ಜನ್ಮಗಳು ಇಲ್ಲ ಎನ್ನುವವರ ಮಾತುಗಳು ಅಸತ್ಯವಾಗುತ್ತವೆ. ಅಂತಹ ಅಸತ್ಯಗಳನ್ನು ಪ್ರವಕ್ತರಿಗೆ ಅಂಟಿಸಿ, ಅವರ ಘನತೆಗೆ ಆತಂಕ ಮಾಡಬಾರದು. ಪ್ರವಕ್ತರ ಮಾತುಗಳನ್ನು ತಪ್ಪಾಗಿ ಅರ್ಥಮಾಡಿಕೊಂಡಿರುವುದರಿಂದ, ದೇವರ ಮಾತುಗಳನ್ನೇ ಅಸತ್ಯಮಾಡಿ ದಂತಾಗುತ್ತದೆ. ದೇವರ ಮಾತುಗಳನ್ನು ಅಸತ್ಯವಾಗಿ ತೋರಿಸುವುದರಿಂದ, ಯಾರಿಗಾದರೂ ಭಯಂಕರವಾದ ಪಾಪವು ಸಂಭವಿಸ ಬಹುದು. ಆದ್ದರಿಂದ ದೇವರ ಜ್ಞಾನವನ್ನು ಯಾವ ಮತಸ್ಥರಾದರೂ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕೆಂದು ಕೋರುತ್ತೇನೆ. ಖುರಾನ್‌ನನ್ನು ಪರಿಶೋಧಿಸಿದ ಕೆಲವರು ದೊಡ್ಡವರು ಖುರಾನ್‌ನಲ್ಲಿ ಇನ್ನೂ ಸ್ವಲ್ಪ ವಾಕ್ಯಗಳು ಪುನರ್ಜನ್ಮಗಳ ಕುರಿತು ಇವೆಯೆಂದು ಬರೆದಿದ್ದಾರೆ. ಅವುಗಳನ್ನು ಕೆಳಗೆ ಹೊಂದಿಸಿದ್ದೇವೆ ನೋಡಿರಿ.

1) ಮತ್ತೆ ಯಾವಾಗಾದರೆ ಶರೀರ ನಶಿಸುತ್ತದೊ, ಆಗ ಆತ್ಮ (ಜೀವಾತ್ಮ) ಆವೊಂದು ಹಳೆಯ ಕವಚವನ್ನು ಬಿಟ್ಟುಹಾಕಿ, ಅಲ್ಲಿಂದ ಬಿಡುಗಡೆಯಾಗಿ ಹೊಸ ಶರೀರವನ್ನು ಧರಿಸುತ್ತದೆ. ಮಾನವನ ದೇಹವು ಒಬ್ಬ ವ್ಯಕ್ತಿಗೆ ಒಂದು ಋತುವಿನಂತೆ ಸ್ವಲ್ಪಕಾಲ ಇರುತ್ತದೆ. ಆತ್ಮಕ್ಕೆ ಆ ಸಮಯವು ಪೂರ್ತಿಯಾಗುತ್ತಲೆ ಅದನ್ನು ಬಿಟ್ಟು ಇನ್ನೊಂದು ಶರೀರವನ್ನು ತೆಗೆದುಕೊಳ್ಳುತ್ತದೆ.

2) ದೈವತ್ವವು ಆತ್ಮಗಳನ್ನು (ಜೀವಿಗಳನ್ನು) ಉದ್ಭವಿಸುವಂತೆ ಮಾಡುತ್ತದೆ. ಇಲ್ಲಿಗೆ ಮತ್ತೆ ಮತ್ತೆ ಕಳುಹಿಸುತ್ತಾ ಇರುತ್ತದೆ. ಯಾವಾಗಾದರೆ ಆ ಆತ್ಮ ದೈವತ್ವವನ್ನು ತಿರುಗಿ ಸೇರಿಕೊಳ್ಳುತ್ತದೋ ಆಗ ಆ ಆತ್ಮ ಮತ್ತೆ ಜನ್ಮಿಸುವ ಅವಶ್ಯವಿಲ್ಲ.

3) ಸೃಷ್ಠಿಕರ್ತನಾದ ದೇವರು ನಿನ್ನನ್ನು ತಯಾರು ಮಾಡಿದರೂ, ನೀನು ಸತ್ತುಹೋದಾಗ ಮತ್ತೆ ಜನ್ಮಿಸುವಂತೆ ಮಾಡಿದರೂ, ಹಾಗೆಯೇ ನೀನು ಜನ್ಮಿಸಿದ ನಂತರ ನಿನ್ನನ್ನು ಮರಣಿಸುವಂತೆ ಮಾಡಿದರೂ, ಹೀಗೆ ತನ್ನನ್ನು ನೀನು ಸೇರುವವರೆಗು ಈ ಜನನ ಮರಣ ಸಮೂಹದಲ್ಲಿ ನಿನ್ನನ್ನು ಪ್ರವೇಶವಿಟ್ಟರೂ ಆ ದೈವತ್ವವನ್ನು, ದೇವರನ್ನು ವಿಸ್ಮರಿಸುತ್ತೀಯ.

4) ನಿನ್ನನ್ನು ಸೃಷ್ಠಿಸಿ ನಿನಗೊಂದು ಇರುವಿಕೆಯನ್ನು ತಯಾರು ಮಾಡಿದೆ, ನೀನು ಸತ್ತುಹೋದರೆ ನಿನ್ನನ್ನು ಜನ್ಮಿಸುವಂತೆ ಮಾಡುತ್ತದೆ, ನೀನು ಜನ್ಮಿಸಿದ ನಂತರ ನಿನ್ನನ್ನು ಮರಣಿಸುವಂತೆ ಮಾಡುವುದು ಆ ದೇವರು ಒಬ್ಬನೆ.

5) ಕಲ್ಲಿನಿಂದ ಬೀಜವನ್ನು ಸಿಡಿದು ಮೊಳಕೆ ಮೊಡಿಸುವಂತೆ, ಸತ್ತುಹೋದವರನ್ನು ಮತ್ತೆ ಜನ್ಮಿಸುವಂತೆ ಮಾಡುವುದು, ಜೀವಿಸುವವರನ್ನು ಮತ್ತೆ ಮರಣಿಸುವಂತೆ ಮಾಡುವುದು ಆ ದೈವತ್ವವೆ.

6) ಈಗ ನಿಮಗೆ ಸತ್ಯವನ್ನು ಬೋಧಿಸುತ್ತೇನೆ, ಯಾವ ಆತ್ಮಗಳಿಗಾದರೆ ಒಂದರ ಬಗ್ಗೆ (ದೈವದ ಬಗ್ಗೆ) ಬಹಳ ಆಸಕ್ತಿ, ಇಷ್ಟ ಇದ್ದರೆ ಆ ಆತ್ಮಗಳು ಎಷ್ಟು ಶರೀರಗಳು ಧರಿಸಿದರೂ, ಎಷ್ಟು ಹೆಸರುಗಳು ಹೊಂದಿದರೂ ಸರಿ ಅವು ದೇವರಿಗೆ ಹತ್ತಿರವಾಗುತ್ತವೆ.

ಈ ವಾಕ್ಯಗಳು ದೈವತ್ವದವೊಂದು ಹಿರಿಮೆಯನ್ನು ತಿಳಿಸುವುದೆ ಅಲ್ಲದೆ, ಮನುಷ್ಯನಿಗೆ ಜನ್ಮಗಳಿವೆಯೆಂದು ಸಹ ತಿಳಿಸುತ್ತವೆ. ಮನುಷ್ಯ ತಾನು ಮಾಡಿಕೊಂಡ ಪಾಪ ಪುಣ್ಯಗಳನ್ನು ಅನುಭವಿಸುವುದಕ್ಕೆ ಹುಟ್ಟುತ್ತಿದ್ದಾನೆನ್ನುವುದು ಸತ್ಯ. ಅದನ್ನೇ ಕರ್ಮಸಿದ್ದಾಂತ ಎನ್ನುತ್ತೇವೆ. ಆ ಕರ್ಮ ಸಿದ್ಧಾಂತವನ್ನು ತಿಳಿಸುವ ವಾಕ್ಯಗಳು ಸಹ ಪವಿತ್ರ ಖುರಾನ್ ಗ್ರಂಥದಲ್ಲಿ ಪ್ರವಕ್ತರವರು ಅಲ್ಲಲ್ಲಿ ತಿಳಿಸಿದ್ದಾರೆ. ಅವುಗಳಲ್ಲಿ ಕೆಲವು ಈ ವಿಧವಾಗಿವೆ.

1) ದೈವತ್ವವು ಅಥವಾ ದೇವರು ಯಾವ ಆತ್ಮವನ್ನು (ಯಾವ ಜೀವಿಯನ್ನು) ತನ್ನ ಶಕ್ತಿಗೆ ಮೀರಿ ಮಾಡು ಎಂದು ನಿರ್ದೇಶಿಸುವುದಿಲ್ಲ. ಆ ಆತ್ಮ ಏನು

ಸಂಪಾದಿಸಿಕೊಂಡಿದೆಯೊ ಅದನ್ನೇ ಹೊಂದುತ್ತದೆ. ಮತ್ತು ಅದಕ್ಕೆ ಯಾವುದು ಲಭಿಸುತ್ತದೆನ್ನುವುದು ಅದರ ಕರ್ತವ್ಯವೆ.

2) ಪ್ರತಿ ಆತ್ಮ ತಾನು ಮಾಡಿದ ಒಳ್ಳೆಯದನ್ನು ತಿರುಗಿ ಹೊಂದುತ್ತದೆ. ಹಾಗೆ ತಾನು ಮಾಡಿದ ಕೆಟ್ಟದ್ದನ್ನು ತಿರುಗಿ ಹೊಂದುತ್ತದೆ.

3) ನಾವು ನಮ್ಮ ಕರ್ಮಗಳ ಲೆಕ್ಕಗಳು ನೋಡಿಕೊಂಡಾಗ ನಾವೇ ನಮ್ಮನ್ನು ತೀರ್ಮಾನಿಸಿಕೊಳ್ಳುತ್ತೇವೆ. ಯಾವ ಆತ್ಮವಾಗಲಿ, ಯಾವುದಕ್ಕು ದೋಷಿಅಲ್ಲ. ಆದರೆ ಸಾಸಿವೆ ಕಾಳಷ್ಟಾದರೂ ಸರಿಯೆ, ಆ ಕರ್ಮವನ್ನು ಅದು ಪಾಪವಾದರು, ಪುಣ್ಯವಾದರು ನಾವು ಮತ್ತೆ ಹೊಂದುತ್ತೇವೆ. ನಮ್ಮ ಆತ್ಮ ಕ್ಷೇತ್ರವು ಆ ಲೆಕ್ಕ ವಿಷಯದಲ್ಲಿ ಬಹಳ ಪಕ್ಕಾ ಇರುತ್ತದೆ.

4) "ನಾವು ಇತರರಿಗೆ ಏನುಮಾಡಿದ್ದೇವೆ, ಇತರರು ನಮಗೇನು ಮಾಡಿದ್ದಾರೆ" ಎನ್ನುವ ಎಲ್ಲಾ ವಿಷಯಗಳು ಬಹಳ ಲೆಕ್ಕವಾಗಿ ನಮ್ಮ ಹತ್ತಿರ ಇರುತ್ತವೆ.

5) ವಿಶ್ವಮಾನವರನ್ನು ಕುರಿತು ಖುರಾನ್‌ನಲ್ಲಿ ಅತ್ಯದ್ಭುತವಾದ ವಾಕ್ಯಗಳಿವೆ. ಆದರೆ ಮತಗಳವೊಂದು ಸಂಕುಚಿತ ಅವಗಾಹನೆಯಿಂದ ಈ ಸತ್ಯವನ್ನು ನಾವು ಮರೆತು ಹೋಗಿದ್ದೇವೆ. ಪ್ರಪಂಚದಲ್ಲಿ ಯಾವ ಮತಸ್ಥರಾದರು ಸರಿ, ಯಾರಾದರೆ ದೈವವನ್ನು ವಿಶ್ವಾಸಿಸುತ್ತಾರೋ ಅವರಿಗೆ ಕೊನೆಯ ದಿನ ಭಯವಿಲ್ಲ ಮತ್ತು ಅವರು ದುಃಖಿಸುವುದಿಲ್ಲ. ನೋಡಿದಿರಾ! ಈ ವಾಕ್ಯ ಎಷ್ಟು ದೊಡ್ಡದಾಗಿದೆಯೊ?

ಕರ್ಮಸಿದ್ಧಾಂತ ವಾಕ್ಯಗಳನ್ನು ಅನುಸರಿಸಿದರೆ ಖುರಾನ್ ಬಹಳ ದೊಡ್ಡದು. ಪ್ರಪಂಚದಲ್ಲಿನ ಸಮಸ್ತ ಮಾನವರಿಗೆ ಅನ್ವಯಿಸುವ ಸೂತ್ರಗಳನ್ನು ಹೇಳಿದೆಯೆಂದು ಅರ್ಥವಾಗುತ್ತಿದೆ. ಖುರಾನ್ ಹೇಳಿದ ಕರ್ಮ ಸಿದ್ಧಾಂತದ ಪ್ರಕಾರ ಮನುಷ್ಯ ಮಾಡಿಕೊಂಡ ಕರ್ಮಕ್ಕೆ ಮನುಷ್ಯನೇ ಜವಾಬ್ದಾರಿ. ಮನುಷ್ಯ ಮಾಡಿಕೊಂಡಿರುವುದನ್ನು ಅನುಭವಿಸುವುದಕ್ಕೆ ಮನುಷ್ಯನನ್ನು ದೇವರು ಮತ್ತೆ ಹುಟ್ಟಿಸಬೇಕಾಗಿ ಬಂದಿದೆ. ಯಾವ ಕರ್ಮ ಇಲ್ಲದವನು ತಿರುಗಿ ಹುಟ್ಟುವ ಅವಶ್ಯವಿಲ್ಲ. ಅಂತಹವರು ದೇವರ ಸನ್ನಿಧಾನದಲ್ಲಿಯೇ ಇರುತ್ತಾರೆ. ದೇವರು

ಮೊದಲು ಕರ್ಮ ಇಲ್ಲದ ಮನುಷ್ಯನನ್ನು ಹುಟ್ಟಿಸಿ ತಾನೇ ಆತನನ್ನು ಜೀವಿಸುವಂತೆ ಮಾಡಿದರೆ, ಮನುಷ್ಯ ತನ್ನನ್ನು ಹುಟ್ಟಿಸಿದ ದೇವರನ್ನು ಮರೆತುಹೋಗಿ, ತಾನೇ ಬದುಕುತ್ತಿದ್ದೇನೆಂದುಕೊಂಡು ಇಲ್ಲದ ಕರ್ಮವನ್ನು ಸಂಪಾದಿಸಿಕೊಂಡು ಮರಳಿ ಮರಳಿ ಹುಟ್ಟುತ್ತಿದ್ದಾನೆ. ನಾವು ಇಷ್ಟೆಲ್ಲಾ ಪುನರ್ಜನ್ಮಗಳಿವೆಯೆಂದು ಹೇಳಿದರೂ ನಂಬದವರು ಇರಬಹುದು. ಅದಕ್ಕೆಂದು ಮುಸ್ಲಿಮ್ ಕುಟುಂಬದಲ್ಲಿ ಸತ್ತುಹೋಗಿ ಮತ್ತೆ ಮುಸ್ಲಿಮ್ ಕುಟುಂಬದಲ್ಲಿಯೆ ಹುಟ್ಟಿದ ಒಬ್ಬ ವ್ಯಕ್ತಿಯ ವಾಸ್ತವ ಸಂಘಟನೆ ಯನ್ನು ನೋಡೋಣ. ಇದಕ್ಕಿಂತ ಮೊದಲು ಹೇಳಿರುವುದು ಒಬ್ಬ ಮುಸ್ಲಿಮ್ ಸ್ತ್ರೀ ಆದ ಹಾಸನ್‌ಳ ಪುನರ್ಜನ್ಮ. ಈಗ ಒಬ್ಬ ಮುಸ್ಲಿಮ್ ಆದ ಪುರುಷನ ಜನ್ಮವನ್ನು ಕುರಿತು ಹೇಳುತ್ತಿದ್ದೇವೆ. ಇದು ಸಹ ಲೆಬನಾನ್ ದೇಶದಲ್ಲಿ ನಡೆದಿರುವುದೆ.

1943ರಲ್ಲಿ ಲೆಬನಾನ್ ದೇಶದಲ್ಲಿ "ಫರ್‌ಮಟ್‌ಟ" ಎಂಬ ನಗರದಲ್ಲಿ ರಷೀದ್ ಖಾದಿಜ್ ಎಂಬ ವ್ಯಕ್ತಿ ಜನ್ಮಿಸಿದ್ದಾನೆ. ಆತನು ಆಟೋಮೊಬೈಲ್ ಮೆಕಾನಿಕ್ ಆಗಿ ಜೀವಿಸುತ್ತಿದ್ದನು. ಆತನಿಗೆ 25 ಸಂವತ್ಸರಗಳ ವಯಸ್ಸಿನಲ್ಲಿ ಒಂದು ದಿನ ಇಬ್ರಹೀಮ್ ಎಂಬ ಸ್ನೇಹಿತನು ರಷೀದ್‌ನನ್ನು ಕಾರಿನಲ್ಲಿ ಸುತ್ತಾಡಲು (ಹೊರಸಂಚಾರ) ಕರೆದುಕೊಂಡು ಹೋಗಿದ್ದಾನೆ. ಇಬ್ರಹೀಮ್ ಸಮುದ್ರ ಪ್ರಾಂತ್ಯದಲ್ಲಿ ಕಾರನ್ನು ವೇಗವಾಗಿ ನಡೆಸುತ್ತಿರುವಾಗ, ಮಿಲಿಟರಿ ಬೀಚ್ ಎನ್ನುವ ಸ್ಥಳದಲ್ಲಿ ಕಾರು ಹಿಡಿತ ತಪ್ಪಿ ಅಪಘಾತಕ್ಕೆ ಗುರಿಯಾಗಿದೆ. ಆಗ ರಷೀದ್ ಕಾರಿನಿಂದ ಹೊರಗೆ ಬಿದ್ದಿದ್ದಾನೆ. ಹಾಗೆ ಬಿದ್ದಾಗ ತಲೆಗೆ ಬಲವಾದ ಗಾಯವಾಗಿ ರಷೀದ್ ಅಲ್ಲಿಯೆ ಮರಣಿಸಿದ್ದಾನೆ. ರಷೀದ್ ಮರಣಿಸಿದ ನಂತರ ಒಂದು ಸಂವತ್ಸರಕ್ಕೆ "ಡಾನಿಯಲ್ ಜರ್ದೀ" ಎನ್ನುವಾತನು ಜನ್ಮಿಸಿದ್ದಾನೆ. ಡಾನಿಯಲ್ ಜರ್ದೀಗೆ ಮಾತುಗಳು ಬಂದಾಗ ಮಾತಾಡಿದ ಮೊದಲಮಾತು ಇಬ್ರಹೀಮ್. ಅಪಘಾತ ನಡೆದ ದಿನದಂದು ಕಾರುನಡೆಸಿದ ತನ್ನ ಸ್ನೇಹಿತನ ಹೆಸರು ಇಬ್ರಹೀಮ್. ಡಾನಿಯಲ್ ಜರ್ದೀ ಎನ್ನುವುದು ಯಾರಿಗು ಅರ್ಥವಾಗಲಿಲ್ಲ. ಇಬ್ರಹೀಮ್ ಎಂದು ಏಕೆ ಹೇಳುತ್ತಾನೆಂದು ತಿಳಿಯಲಿಲ್ಲ. ನಂತರ ಎರಡು

ವರ್ಷ ವಯಸ್ಸಿನಲ್ಲಿ ಡಾನಿಯಲ್ ಜರ್ದೀ, ತನ್ನ ತಾಯಿ "ಲತೀಷಾ"ಳೊಂದಿಗೆ ನಾನು ಮನೆಗೆ ಹೋಗಬೇಕು ಎನ್ನುತ್ತಾನೆ. ನಂತರ ಆರು ತಿಂಗಳುಗಳಿಗೆ, ಅಂದರೆ ಎರಡುವರೆ ಸಂವತ್ಸರಕ್ಕೆ ಇದು ನನ್ನ ಮನೆ ಅಲ್ಲ, ನೀನು ನನ್ನ ತಾಯಿಯಲ್ಲ. ನನಗೆ ತಂದೆ ಇಲ್ಲ, ನನ್ನ ತಂದೆ ಮರಣಿಸಿದ್ದಾನೆ ಎಂದು ಕೆಲವು ಮಾತುಗಳು ಮಾತನಾಡಿದನು. ಆಗಿನ ತನ್ನ ತಂದೆಯಾದ ಯೂಸಫ್‌ನನ್ನು ಅಪ್ಪ ಎಂದು ಕರೆಯದೆ ಯೂಸುಫ್ ಎಂದು ಹೆಸರಿಂದ ಕರೆಯುತ್ತಿದ್ದನು. ಅಷ್ಟೇ ಅಲ್ಲದೆ ತನ್ನ ತಂದೆ "ನಯೀಮ್" ಎಂದು ಹೇಳುತ್ತಿದ್ದನು. ನಯೀಮ್ ಎನ್ನುವದು ರಷೀದ್ ತಂದೆಯ ಹೆಸರು.

ಡಾನಿಯಲ್ ಜರ್ದೀಗೆ ಎರಡೂವರೆ ಸಂವತ್ಸರಗಳ ವಯಸ್ಸಿನಲ್ಲಿಯೇ ಆತನ ಕುಟುಂಬವೆಲ್ಲಾ ಪಿಕ್ನಿಕ್‌ಗೆ ಹೋದಾಗ ಅವರಜೊತೆ ಜರ್ದೀ ಸಹ ಹೋಗಿದ್ದಾನೆ. ಆಗ ಅವರ ಬಂಧುಗಳಲ್ಲಿ ಒಬ್ಬರು ಪರ್ಮಟ್‌ಟಾ ಎನ್ನುವ ಹೆಸರನ್ನು ತಪ್ಪಾಗಿ ಉಚ್ಚರಿಸಿದಾಗ, ಜರ್ದೀ ಸರಿಮಾಡಿ ಹೇಳುತ್ತಾನೆ. ಆಗ ಜರ್ದೀ ತಂದೆಯಾದ ಯೂಸಫ್ ಈ ಹೆಸರು ನಿನಗೇಗೆ ತಿಳಿದಿದೆ ಎಂದು ಕೇಳಿದಾಗ! ಈ ನಗರದ ಹೆಸರು ನನಗೆ ಚೆನ್ನಾಗಿ ಗೊತ್ತು, ಇದು ನಾನು ನಿವಾಸಿಸಿದ ನಗರವೆಂದು ಹೇಳುತ್ತಾನೆ. ಡಾನಿಯಲ್ ಜರ್ದೀ ಹೇಳಿದ ಮಾತುಗಳು ಆತನ ಕುಟುಂಬದವರಿಗೆ ಏನು ಅರ್ಥವಾಗಲಿಲ್ಲ. ನಂತರ ಸ್ವಲ್ಪಕಾಲಕ್ಕೆ ಡಾನಿಯಲ್ ಜರ್ದೀ ತನ್ನ ತಾಯಿ ಕಾರಿನಲ್ಲಿ ಪ್ರಯಾಣಿಸುತ್ತಿರುವಾಗ, ಅವರ ಕಾರು ಮಿಲಿಟರಿ ಬೀಚ್ ಹತ್ತಿರಕ್ಕೆ ಬರುವಷ್ಟರಲ್ಲಿ ಆ ಪ್ರದೇಶವನ್ನು ನೋಡಿದ ಡಾನಿಯಲ್ ಕಣ್ಣು ಮುಚ್ಚಿಕೊಂಡು, ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅಳುವುದಕ್ಕೆ ಪ್ರಾರಂಭಿಸಿದ್ದಾನೆ. ನಂತರ "ನಾನು ಮರಣಿಸಿದ್ದು ಇಲ್ಲೆ" ಎಂದು ಜೋರಾಗಿ ಕಿರುಚುತ್ತಾನೆ. ಅಷ್ಟೇ ಅಲ್ಲದೆ ಹಿಂದಿನ ಜನ್ಮದಲ್ಲಿ ತಾನು ಕಾರು ಮೆಕಾನಿಕ್ ಎಂದು, ನನ್ನ ಸ್ನೇಹಿತನು ಇಬ್ರಹೀಮ್ ಕಾರು ನಡೆಸುತ್ತಿರುವಾಗ ಕಾರು ಹಿಡಿತ ತಪ್ಪಿತ್ತೆಂದು, ಆಗ ಹೊರಬಿದ್ದ ನಾನು ತಲೆಗೆ ಗಾಯವಾಗಿ ಮರಣಿಸಿದ್ದೇನೆಂದು ಹೇಳಿದ್ದಾನೆ.

ಶಾಲೆಯಲ್ಲಿ ಜರ್ದೀ ನರ್ಸರೀ ಓದುತ್ತಿರುವ ದಿನಗಳಲ್ಲಿ ತನ್ನ ಹೆಸರು ಡಾನಿಯಲ್ ಜರ್ದಿ ಅಲ್ಲ ಎಂದು, ರಷೀದ್ ಖಾದೀಜ್ ಎಂದು ಹೇಳಿದ್ದಾನೆ. ಅದೇ ಸ್ಕೂಲಿನಲ್ಲಿ ಮತ್ತೊಂದು ಸಂದರ್ಭದಲ್ಲಿ ಯುಕ್ತ ವಯಸ್ಸಿನಲ್ಲಿರುವ ಸುಂದರವಾದ ಲೇಡೀಟೀಚರ್‌ನನ್ನು ಚಿವುಟಿ ನೀನು ಬಹಳ ಸುಂದರವಾಗಿದ್ದೀಯ ಎಂದು ಹೇಳಿದ್ದನಂತೆ. ಆ ವಿಧದಲ್ಲಿ ಮಾತುಗಳಲ್ಲಿಯು, ಕೈಗಳಲ್ಲಿಯು ಕೆಲವು ಸಂದರ್ಭಗಳಲ್ಲಿ ವಿಚಿತ್ರವಾಗಿ ಕಾಣಿಸುತ್ತಿರುವ ಡಾನಿಯಲ್, ಹೇಳುವುದು ಎಷ್ಟರ ಮಟ್ಟಿಗೆ ನಿಜವೆಂದು ತಿಳಿದುಕೊಳ್ಳುವುದಕ್ಕೆ ಆತನ ತಂದೆ ಯೂಸಫ್, ಪರ್‌ಮಟ್‌ಟಾ ಎಂಬ ಊರಿಗೆ ಹೋಗಿ ಡಾನಿಯಲ್ ವರ್ಣಿಸಿದ ವಿಧದಲ್ಲಿ ಕಾರು ಮೆಕಾನಿಕ್‌ನನ್ನು ಕುರಿತು, ಮಿಲಿಟರಿ ಬೀಚ್ ಹತ್ತಿರ ಆಕ್ಸಿಡೆಂಟ್‌ನ್ನು ಕುರಿತು ವಿಚಾರಿಸಿದಾಗ ಡಾನಿಯಲ್ ಹೇಳಿರುವುದೆಲ್ಲಾ ನಿಜವೆಂದು ತಿಳಿಯುತ್ತದೆ. ಈ ವಿಷಯವನ್ನು ತಿಳಿದುಕೊಂಡ ರಷೀದ್ ಖಾದೀಜ್‌ನ ಬಂಧುಗಳೂ, ಮಿತ್ರರೆಲ್ಲ ಡಾನಿಯಲ್‌ನನ್ನು ನೋಡುವುದಕ್ಕೆ ಹೊರಟು ಹೋಗುತ್ತಾರೆ. ಹಾಗೆ ಹೋಗಿದ್ದವರನ್ನು ನೋಡಿದ ಡಾನಿಯಲ್ ರಷೀದ್ ತಂಗಿ ನಜ್ಲಾನ್‌ಳನ್ನು ತಕ್ಷಣವೆ ಗುರುತಿಸಿ ಆಕೆಯನ್ನು ಹೆಸರಿನಿಂದಲೆ ಕರೆದಿದ್ದಾನೆ. ಮೊದಲು ತನ್ನ ಬಂಧುಗಳೆಲ್ಲರನ್ನು ನೋಡುತ್ತಲೆ ಡಾನಿಯಲ್ ತನ್ನ ತಾಯಿ ಲತಿಷಾಗೆ ಅವರೆಲ್ಲರಿಗು ಬಾಳೆಹಣ್ಣು ತಂದುಕೊಡು ಎಂದು ಹೇಳುತ್ತಾನೆ. ಹಿಂದಿನ ಜನ್ಮದಲ್ಲಿ ರಷೀದ್‌ಗೆ ಬಾಳೆಹಣ್ಣೆಂದರೆ ಬಹಳ ಇಷ್ಟ. ರಷೀದ್ ಮರಣದ ನಂತರ ರಷೀದ್ ನೆನಪಿಗೆ ಬಾರದಂತಿರುವುದಕ್ಕೆ ರಷೀದ್‌ನ ತಾಯಿ ಆತನ ತಂಗಿ ಇಬ್ಬರು ಬಾಳೆಹಣ್ಣುಗಳನ್ನು ತಿನ್ನುವುದು ಬಿಟ್ಟಿರುತ್ತಾರೆ. ನಂತರ ಡಾನಿಯಲ್ ಪರ್‌ಮಟ್‌ಟಗೆ ಹೋಗುತ್ತಲೆ ತನ್ನ ಸ್ನೇಹಿತನಾದ ಇಬ್ರಹೀಮ್‌ನನ್ನು ಮತ್ತೊಬ್ಬ ಸ್ನೇಹಿತನಾದ ಬಜಾಜ್‌ನನ್ನು ಗುರುತಿಸಿ ಮಾತನಾಡಿದ್ದಾನೆ.

ರಷೀದ್ ಕುಟುಂಬದವರೆಲ್ಲ ರಷೀದ್ ಮತ್ತೆ ಡಾನಿಯಲ್ ಜರ್ದೀ ಯಾಗಿ ಹುಟ್ಟಿದ್ದಾನೆಂದು ಅಂಗೀಕರಿಸಿದರು. ರಷೀದ್ ಕುಟುಂಬವು ಡಾನಿಯಲ್ ಫೋಟೊವನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡಿದ್ದಾರೆ. ರಷೀದ್ ತನ್ನ ಎರಡನೆ

ಜನ್ಮದಲ್ಲಿ ಸಹ ಕಾರು ನಡೆಸಬೇಕೆಂದರೆ ಭಯಪಡುತ್ತಿದ್ದನು. ಈ ವಿಧವಾಗಿ ಕಾರು ನಡೆಸಬೇಕೆಂದರೆ ಬರುವ ಭಯವಾಗಲಿ, ಹಿಂದಿನ ಜನ್ಮ ಜ್ಞಾಪಕವಾಗಲಿ ಡಾನಿಯಲ್ ತಂದುಕೊಂಡರೆ ಬಂದಿರುವವಲ್ಲ. ಡಾನಿಯಲ್‌ಗೆ ಯಾವ ಸಂಬಂಧವಿಲ್ಲದೆ ಆತನ ಶರೀರದಲ್ಲಿರುವ ಆತ್ಮ ಮಾಡಿದ ಮೂರನೆ ಕೆಲಸವೆಂದು ನಾವು ಗುರುತಿಸಬಹುದು. ಮನುಷ್ಯ ಸತ್ತುಹೋದರೆ ಮತ್ತೆ ಜನ್ಮಿಸುತ್ತಾನೆಂದು ಮನುಷ್ಯರಿಗೆ ತಿಳಿಸುವುದಕ್ಕೆ ಆತ್ಮ ಮಾಡಿದ ಕೆಲಸವೆಂದು ನಾವು ಹೇಳಿಕೊಳ್ಳ ಬಹುದು. ಪ್ರತಿ ಮನುಷ್ಯನಲ್ಲಿ ಜೀವಾತ್ಮಗೆ ಜೊತೆಯಾಗಿ ಆತ್ಮ ನಿವಾಸಿಸುತ್ತಾ ಎಲ್ಲೋ ಒಂದುಕಡೆ ಈ ವಿಧವಾದ ಜ್ಞಾಪಕವನ್ನು ತರಿಸಿರುವ ಸಂಘಟನೆಗಳೆ ಪುನರ್ಜನ್ಮ ವೃತ್ತಾಂತಗಳು. ಪುನರ್ಜನ್ಮಗಳು ಇಲ್ಲ ಎನ್ನುವವರ ವಾದ ಸುಳ್ಳೆಂದು, ಇವೆಯೆನ್ನುವುದು ಶಾಸ್ತ್ರಬದ್ಧವೆಂದು ಆತ್ಮ ತಿಳಿಸಿದ ಇಂತಹ ಸಂಘಟನೆಗಳಿಂದ ತಿಳಿಯುತ್ತಿದೆ.

ಮನುಷ್ಯ ಆಧ್ಯಾತ್ಮಿಕ ವಿದ್ಯೆಯನ್ನು ಅಲ್ಪವಾಗಿ ತಿಳಿದುಕೊಳ್ಳುವನು. ಕೆಲವು ಲಕ್ಷ ಜನಸಂಖ್ಯೆಯಲ್ಲಿ ಯಾವನೊ ಒಬ್ಬನು ದೈವಜ್ಞಾನದ ಮೇಲೆ ಆಸಕ್ತಿಹೊಂದಿ ಅದನ್ನು ತಿಳಿದುಕೊಳ್ಳಬೇಕೆಂದು ಪ್ರಯತ್ನಿಸಿದರೂ, ವಿಷಯಗ್ರಾಹಿತ ಲೋಪದಿಂದ, ಭಾವನೆಗಳು ಬೇರೆಯಾಗಿ ಅರ್ಥ ಮಾಡಿಕೊಳ್ಳುವುದರಿಂದ, ಹೇತುದೃಕ್ಪದವು ಇಲ್ಲವಾದ್ದರಿಂದ ಇರುವುದನ್ನು ಇಲ್ಲವೆಂದು, ಇಲ್ಲದನ್ನು ಇರುವಹಾಗೆ ಅರ್ಥಮಾಡಿಕೊಳ್ಳುತ್ತಿದ್ದಾನೆ. ಆದ್ದರಿಂದ ದೇವರ ಜ್ಞಾನ ಪ್ರಜೆಗಳಿಗೆ ಸತ್ಯರೂಪದಲ್ಲಿ ಅಲ್ಲದೆ ಅಸತ್ಯರೂಪದಲ್ಲಿ ಹರಡಿದೆ. ಭೂಮಿಮೇಲೆ ನಡೆದಿರುವ ಮತ್ತು ನಡೆಯುತ್ತಿರುವ ಪುನರ್ಜನ್ಮಗಳ ಸಂಘಟನೆಗಳ ಮುಂದೆ ಪುನರ್ಜನ್ಮಗಳು ಇಲ್ಲ ಎನ್ನುವುದು, ದೇವರ ಜ್ಞಾನ ಅಸತ್ಯವಾಗಿ ಕಾಣಿಸುವ ಹಾಗೆ ಹೇಳಿಕೊಳ್ಳು ವುದು ಪೂರ್ತಿ ಮಾನವನ ತಪ್ಪಾಗುವುದು. ಪುನರ್ಜನ್ಮಗಳು ಇಲ್ಲ ಎಂದು ಕೆಲವು ಮತದವರು ಹೇಳುತ್ತಿದ್ದರೂ ಆ ಮತ ಪ್ರವಕ್ತರಾಗಲಿ, ಪ್ರವಕ್ತರಿಂದ ಹೇಳಿಸಿದ ದೇವರಾಗಲಿ ಎಲ್ಲಿಯೂ ಪುನರ್ಜನ್ಮಗಳು ಇಲ್ಲವೆಂದು ಮಾತ್ರ ಹೇಳಲಿಲ್ಲ. ಸ್ವರ್ಗ ನರಕಗಳೆಂದು ಹೇಳಿಕೊಳ್ಳುವವರು ನರಕದಲ್ಲಿ ಕಷ್ಟ, ಸ್ವರ್ಗದಲ್ಲಿ

ಸುಖ ಇದೆಯೆಂದು ಹೇಳುತ್ತಲೆ ದೇವರ ಸನ್ನಿಧಾನವಾದ ಪರಲೋಕವನ್ನು ಅಥವಾ ಪರಂಧಾಮವನ್ನು ಪ್ರತ್ಯೇಕವಾಗಿ ಹೇಳದೆ ಅದನ್ನು ಸಹ ಸ್ವರ್ಗವೆಂದೇ ಹೇಳುತ್ತಿದ್ದಾರೆ. ಸ್ವರ್ಗಕ್ಕೆ, ದೇವರ ಸನ್ನಿಧಾನಕ್ಕೆ ನರಿಗೂ ನಾಗಲೋಕಕ್ಕೂ ಇರುವಷ್ಟು ವ್ಯತ್ಯಾಸವಿದೆಯೆಂದು ತಿಳಿಯದೆ ಮಾತನಾಡುತ್ತಿದ್ದಾರೆ. ದೇವರ ಸನ್ನಿಧಾನ, ಹೀಗಿರುತ್ತದೆಂದು ಯಾರು ಹೇಳಲಾಗುವುದಿಲ್ಲ. ಅಲ್ಲಿಗೆ ಹೋದವನಿಗೆ ಮಾತ್ರವೆ ತಿಳಿಯುತ್ತದಾಗಲಿ ಪಕ್ಕದವರಿಗೆ ಯಾರಿಗು ಅದು ಏನೆಂದು ತಿಳಿಯುವುದಿಲ್ಲ. ಹಾಗಿರುವಾಗ ಅದನ್ನು ಸ್ವರ್ಗವೆಂದು ಹೇಳಿಕೊಳ್ಳುವುದು ಪೂರ್ತಿ ತಪ್ಪಾಗುತ್ತದೆ. ಸ್ವರ್ಗ ಸುಖಗಳ ನಿಲಯ, ನರಕ ಕಷ್ಟಗಳ ನಿಲಯ. ಅಷ್ಟೇ ಅಲ್ಲದೆ ಅವು ಎಲ್ಲಿಯೂ ಇಲ್ಲ, ಆ ಎರಡು ಭೂಮಿಮೇಲೆಯೆ ಮನುಷ್ಯರ ಮಧ್ಯದಲ್ಲಿಯೆ ಇವೆ. ಸ್ವರ್ಗ ಸುಖಗಳನ್ನು ಅನುಭವಿಸುವವರನ್ನು ನರಕ ಬಾಧೆಗಳನ್ನು ಅನುಭವಿಸುವವರನ್ನು ಇಲ್ಲಿಯೇ ನೋಡಬಹುದು. **ಆಧ್ಯಾತ್ಮಿಕ ಎನ್ನುವದು ಪ್ರತ್ಯೇಕವಾದ ದೇವರ ರಾಜ್ಯವಂತದ್ದು. ಮತ ಎನ್ನುವುದು ಒಂದು ಪ್ರತ್ಯೇಕವಾದ ಮಾಯಾ ರಾಜ್ಯವಂತದ್ದು**. ನಾನು ಜ್ಞಾನಿ ಎನ್ನುವವರೆಲ್ಲ ಮತ ಜ್ಞಾನದಲ್ಲಿ ಬಿದ್ದು ದೇವರ ಜ್ಞಾನವನ್ನು ವಿಸ್ಮರಿಸುತ್ತಿದ್ದಾರೆ. ಆದ್ದರಿಂದ ಆಧ್ಯಾತ್ಮಿಕ ಅರ್ಥವಾಗಬೇಕೆಂದರೆ ಯಾವ ಮನುಷ್ಯನಾದರು, ಯಾವ ಪ್ರವಕ್ತ ಹೇಳಿರುವು ದನ್ನಾದರು ಮತಕ್ಕೆ ಸಂಬಂಧವಿಲ್ಲದೆ ತಿಳಿದುಕೊಂಡರೆ ದೈವ ಗ್ರಂಥಗಳಾದ ಖುರಾನ್‌ನಲ್ಲು, ಬೈಬಿಲ್‌ನಲ್ಲು, ಗೀತೆಯಲ್ಲು ಅಸಲಾದ ದೈವಜ್ಞಾನವೆ ಕಾಣಿಸುತ್ತದೆ.

ಬ್ರಹ್ಮವಿದ್ಯಾಶಾಸ್ತ್ರದ ಪ್ರಕಾರ ಪುನರ್ಜನ್ಮಗಳು ವಾಸ್ತವವೆ ಆದರೂ ಅವುಗಳನ್ನು ಕೆಲವರೇ ಒಪ್ಪಿಕೊಳ್ಳುತ್ತಿದ್ದಾರೆ. ಕೆಲವರು ಹೇತುವಾದಿಗಳು, ನಾಸ್ತಿಕವಾದಿಗಳು ಒಪ್ಪಿಕೊಳ್ಳುವುದಿಲ್ಲ. ವಾಸ್ತವವಾಗಿ ಹೇತುವಾದವೆನ್ನುವುದು ಸತ್ಯ ಪರಿಶೋಧನೆ ನಿಮಿತ್ತವೆ ಇದ್ದರೂ, ಹೇತುವಾದಿಗಳೆನ್ನುವವರು ಮಾತ್ರ ಶೋಧನೆ ಮಾಡುವುದಿಲ್ಲ. ತಮ್ಮನ್ನು ತಾವು ಮೇಧಾವಿಗಳೆಂದು ವರ್ಣಿಸಿಕೊಳ್ಳುವ ಇಂದಿನ ಹೇತುವಾದಿಗಳು ತಮಗೆ ತಿಳಿಯದಿರುವವುಗಳನ್ನು ಮೂಢನಂಬಿಕೆಗ ಳೆಂದು, ಮಾನಸಿಕ ರೋಗಗಳೆಂದು ತೆಗೆದು ಹಾಕುತ್ತಿದ್ದಾರೆ. ಆದ್ದರಿಂದ

ಹೇತುವಾದಿಗಳೆನ್ನುವವರು ಈ ದಿನ ನಾಸ್ತಿಕರಾಗಿ ಇದ್ದಾರೆಂದು ಹೇಳಬಹುದು. ಎಲ್ಲೋ ಯಾವ ದೇಶದಲ್ಲೋ ಅಲ್ಲದೆ ಭಾರತದೇಶದಲ್ಲಿಯೂ ಸಹ "ಧೃವಂ ಜನ್ಮ ಮೃತಸ್ಯಚ" ಎನ್ನುವ ಮಾತು ನಿರೂಪಣೆ ನಿಮಿತ್ತ ಅನೇಕ ಕಡೆ ಅನೇಕ ಪುನರ್ಜನ್ಮಗಳು ನಡೆದಿವೆ. ಪ್ರತ್ಯಕ್ಷ ನಿರೂಪಣೆಗೆ ಬರುತ್ತಾ ಸಾಕ್ಷ್ಯಾಧಾರಗಳು ದೃಢವಾಗಿ ಕಾಣಿಸಿದರೂ, ಕೆಲವರು ಹೇತುವಾದಿಗಳು ಅದೊಂದು ಮಾನಸಿಕ ರೋಗವೆಂದು, ವಾಸ್ತವವಲ್ಲ ಎಂದು ಹೇಳಿದ ಸಂದರ್ಭಗಳು ಎಷ್ಟೋ ಇವೆ. ಆದರೂ ಒಬ್ಬ ದೊಡ್ಡ ಶಾಸ್ತ್ರಜ್ಞರಾದ "ಇಯಾನ್ ಸ್ಟೀವೆನ್‌ಸನ್" ಎನ್ನುವಾತನು ಇತ್ತ ಸೈನ್ಸನ್ನು, ಅತ್ತ ವಿಶ್ವಾಸವನ್ನು ಅನುಸಂಧಾನಿಸುತ್ತಾ ಪರಿಶೋಧನೆಗಳು ಮಾಡಿ ಕೊನೆಗೆ ಪುನರ್ಜನ್ಮಗಳು ಎನ್ನುವವು ವಿಜ್ಞಾನಪರವಾಗಿ ಒಂದು ಸಿದ್ಧಾಂತವೆಂದು ಹೇಳಿದ್ದಾನೆ. ಅವರು ಎಷ್ಟೋ ಪರಿಶೋಧನೆಗಳು ಮಾಡಿ 1993ರಲ್ಲಿ ಪುನರ್ಜನ್ಮಗಳು ಸತ್ಯವೆಂದು ಹೇಳಿದ್ದಾರೆ. ಆದರೆ ನಾವು ವಿಜ್ಞಾನವಾಗಿ ಯಾವ ಪರಿಶೋಧನೆ ಮಾಡದೆ, ಜ್ಞಾನ ಪರಿಶೋಧನೆ ಮಾತ್ರ ಮಾಡಿ, 1980ನೆ ಸಂವತ್ಸರದಲ್ಲಿಯೇ **"ಜನನ ಮರಣ ಸಿದ್ಧಾಂತ"**ವನ್ನು ಬಹಿರ್ಗತ ಮಾಡಿದ್ದೇವೆ. ನಂತರ ಆ ಸಿದ್ಧಾಂತಕ್ಕೆ ಅನುಸಂಧಾನವಾಗಿ **"ಮರಣ ರಹಸ್ಯ"**ವನ್ನು ತಿಳಿಸಿದ್ದೇವೆ ಈಗ **"ಪುನರ್ಜನ್ಮ ರಹಸ್ಯ"**ವನ್ನು ತಿಳಿಸುತ್ತಿದ್ದೇವೆ. ನಮ್ಮ ಶೋಧನೆಯಲ್ಲಿ ಪ್ರತಿ ಚಿಕ್ಕ ಪ್ರಶ್ನೆಗು ಉತ್ತರಕೊಟ್ಟಿದ್ದೇವೆ. ಅಷ್ಟೇ ಅಲ್ಲದೆ ಈಗ ಭಾರತದೇಶದಲ್ಲಿ ಇಲ್ಲಿನ ಪರಿಸ್ಥಿತಿಯಲ್ಲಿರುವ ಪುನರ್ಜನ್ಮಗಳನ್ನು ವಿವರಿಸುತ್ತಾ ಅವುಗಳಲ್ಲಿನ ಪ್ರಶ್ನೆಗಳಿಗೆ ಉತ್ತರವನ್ನು ಹೇಳಬೇಕೆಂದುಕೊಂಡಿದ್ದೇವೆ. ಇತರೆ ದೇಶವಾದ ಲೆಬನಾನ್‌ನಲ್ಲಿ ನಡೆದ ಸಂಘಟನೆಗಳು ಪ್ರತ್ಯೇಕಿಸಿ ಇಸ್ಲಾಮ್ ಸಮಾಜದಲ್ಲಿ ನಡೆದಿರುವವಾದರೆ, ಇಲ್ಲಿ ಭಾರತದೇಶದಲ್ಲಿ ನಡೆದ ಸಂಘಟನೆಗಳು ಇಂದೂ (ಹಿಂದೂ) ಸಮಾಜದಲ್ಲಿ ನಡೆದಿವೆ. ಅವುಗಳಲ್ಲಿ ಒಂದನ್ನು ಕೆಳಗೆ ವಿವರಿಸಿಕೊಂಡು ನೋಡೋಣ.

ಭಾರತದೇಶದಲ್ಲಿ ದ್ವಾಪರಯುಗದಿಂದ ಪುನರ್ಜನ್ಮಗಳನ್ನು ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆ ಶಾಸ್ತ್ರೀಯವಾಗಿ ಹೇಳುತ್ತಲೆ ಬಂದಿದೆ. ಆದರೂ

ಕೆಲವರು ಅದನ್ನು ಕಾಲಕ್ಷೇಪಕ್ಕೆ ಹೇಳಿಕೊಳ್ಳುವ ಕಥೆಯಂತೆ ಲೆಕ್ಕಿಸಿಕೊಂಡಿದ್ದಾರಾಗಲಿ, ಅದು ಮಾನವನ ಜೀವನ ಚರಿತ್ರೆಯಲ್ಲಿ ನಡೆಯುತ್ತಿರುವ ಸತ್ಯವೆಂದು ಪೂರ್ತಿಯಾಗಿ ತಿಳಿದುಕೊಳ್ಳದೆ ಹೋಗಿದ್ದಾರೆ. ಕೆಲವರಾದರೆ ಪುನರ್ಜನ್ಮ ಎನ್ನುವುದು ಅಸತ್ಯವೆಂದು ಹೇಳಿರುವವರು ಎಷ್ಟೋ ಜನ ಇದ್ದಾರೆ. ಆದರೆ ಇಂತಹ ಕಾಲದಲ್ಲಿ ಭಾರತದೇಶಕ್ಕೆ ಸಂಬಂಧಿಸಿದ "ವಿಕ್ರಮರಾಜ್‌ಸಿಂಗ್ ಚೌಹಾನ್" ಎಂಬ ಫೋರೆನ್ಸಿಕ್ ಸೈಂಟಿಸ್ಟ್ ಮಧ್ಯಪ್ರದೇಶ್ ರಾಷ್ಟ್ರದಲ್ಲಿನ ಝಾನ್ಸೀಯಲ್ಲಿರುವ ಬುಂದೇಲ್‌ಖಂಡ್ ಯೂನಿವರ್ಸಿಟೀಯಲ್ಲಿ ನಡೆದ "ನೇಷನಲ್ ಕಾನ್ಫರೆನ್ಸ್ ಸೈಂಟಿಸ್ಟ್ ಇನ್ ಇಂಡಿಯಾ" ಮೀಟಿಂಗ್‌ಗೆ ಹಾಜರಾಗಿ, ತಾನು ಪುನರ್ಜನ್ಮಗಳನ್ನು ಬಲಪಡಿಸುತ್ತೇನೆಂದು ಹೇಳುವುದೆ ಅಲ್ಲದೆ, ಪುನರ್ಜನ್ಮ ಜ್ಞಾಪಕಗಳ ವಿವರಗಳನ್ನು ತಿಳಿಸುವ ಒಂದು "ಕೇಸುಸ್ಟಡೀ"ಯನ್ನು ಆ ಸಮಾವೇಶದಲ್ಲಿ ಸಮರ್ಪಿಸಿದ್ದಾನೆ. ಆ ವಿವರಗಳು ಹೀಗಿವೆ. ತರನ್‌ಜಿತ್‌ಸಿಂಗ್ ಎಂಬ ಆರು ವರ್ಷಗಳ ಬಾಲಕ ಪಂಜಾಬ್ ರಾಷ್ಟ್ರದಲ್ಲಿನ "ಆಲ್ನಮಿಯಾನಾ" ಎನ್ನುವ ಗ್ರಾಮಕ್ಕೆ ಸೇರಿದವನು. ಆತನು ತನ್ನ ತಾಯಿ ತಂದೆಯರಿಗೆ ತನ್ನ ಹಿಂದಿನ ಜನ್ಮದ ವಿವರಗಳನ್ನು ಹೇಳುತ್ತಿದ್ದನು. ತಾನು ಹಿಂದಿನ ಜನ್ಮದಲ್ಲಿ "ಚಕ್ಕೇಲಾ" ಎನ್ನುವ ಗ್ರಾಮಕ್ಕೆ ಸೇರಿದ ನಿವಾಸಿಯೆಂದು, ತನ್ನ ಹೆಸರು ಸತ್‌ರಾಮ್‌ಸಿಂಗ್ ಎಂದು, ತಾನು 1992 ಸೆಪ್ಟೆಂಬರ್ 10ನೇ ತಾರೀಖಿನಂದು ಸ್ಕೂಲ್‌ನಿಂದ ಹಿಂತಿರುಗಿ ಬರುತ್ತಿರುವಾಗ ಒಂದು ಸ್ಕೂಟರ್ ತನ್ನನ್ನು ವೇಗವಾಗಿ ತಗುಲಿತೆಂದು, ಅದರಿಂದ ತನ್ನ ತಲೆಗೆ ಗಾಯವಾಗಿದೆಯೆಂದು, ಆ ಗಾಯದ ಕಾರಣದಿಂದ ಎರಡನೆ ದಿನ ಮರಣಿಸಿದ್ದೇನೆಂದು, ತನ್ನನ್ನು ಹಿಂದಿನ ಜನ್ಮದಲ್ಲಿನ ತನ್ನ ಬಂಧುಗಳ ಹತ್ತಿರಕ್ಕೆ ಕರೆದುಕೊಂಡು ಹೋಗೆಂದು ದಿನಾ ಕೇಳುತ್ತಿದ್ದನು. ತರನ್‌ಜಿತ್‌ಸಿಂಗ್ ಎರಡು ಸಂವತ್ಸರಗಳ ವಯಸ್ಸಿನಲ್ಲಿಯೆ ಹಿಂದಿನ ಜನ್ಮ ಜ್ಞಾಪಕಗಳನ್ನು ಕುರಿತು ಬಂದುಬಾರದ ಮಾತುಗಳಿಂದ ವಿವರಿಸುತ್ತಾ ಇರುತ್ತಿದ್ದನು.

ತರನ್‌ಜಿತ್‌ಸಿಂಗ್ ಚಿಕ್ಕ ಹುಡುಗನಾಗಿರುವುದರಿಂದ ಆತನ ಮಾತುಗಳನ್ನು ಯಾರೂ ಕೇಳಿಸಿಕೊಳ್ಳುತ್ತಿರಲಿಲ್ಲ. ಆತನಿಗೆ ಆರು ಸಂವತ್ಸರಗಳ

ವಯಸ್ಸು ಬರುವಷ್ಟರಲ್ಲಿ ಆತನಿಗೆ ಪೂರ್ವ ಜನ್ಮ ಜ್ಞಾಪಕಗಳು ಹೆಚ್ಚಾಗಿ ಬರುತ್ತಿದ್ದವು. ಅದರಿಂದ ಆತನು ತನ್ನ ತಾಯಿತಂದೆಯರಲ್ಲಿ ತನ್ನನ್ನು ಹಿಂದಿನ ಜನ್ಮದಲ್ಲಿನ ಗ್ರಾಮಕ್ಕೆ ಕರೆದುಕೊಂಡು ಹೋಗೆಂದು ಅಳುತ್ತಾ ಹೇಳುತ್ತಿದ್ದನು. ಆತನ ನೋವನ್ನು ನೋಡಲಾಗದೆ ಆತನ ತಂದೆ ರಂಜಿತ್‌ಸಿಂಗ್ ಆ ಬಾಲಕ ಹೇಳಿದ ಚಕ್ಕೆಲಾ ಎನ್ನುವ ಗ್ರಾಮಕ್ಕೆ ಕರೆದುಕೊಂಡು ಹೋಗುತ್ತಾನೆ. ಆದರೆ ಅಲ್ಲಿ ಆ ಬಾಲಕ ಹೇಳಿದ ಕುಟುಂಬ ಆ ಊರನ್ನು ಬಿಟ್ಟು ಹೋಗಿದೆಯೆಂದು ತಿಳಿದು ಅಲ್ಲಿಂದ ಆ ಕುಟುಂಬವಿರುವ ಊರಿಗೆ ಹೋಗುತ್ತಾರೆ. ಅಲ್ಲಿ ತರನ್‌ಜಿತ್ ಸಿಂಗ್ ಹೇಳಿದ ಗತಜನ್ಮದಲ್ಲಿನ ಆತನ ತಾಯಿ ತಂದೆಯರನ್ನು ಆ ಬಾಲಕ ಗುರುತಿಸಿದ್ದಾನೆ. ಆಗ ಪ್ರಸ್ತುತ ಜನ್ಮ ತಂದೆಯಾದ ರಂಜಿತ್‌ಸಿಂಗ್‌ರವರಿಗೆ ಆ ಬಾಲಕನ ವಿಷಯವೆಲ್ಲಾ ಹೇಳಿದಾಗ, ಯಾವಾಗಲೊ ಸತ್ತು ಹೋದ ತನ್ನ ಮಗ ಮತ್ತೆ ಜನ್ಮಿಸಿ ತಮ್ಮಹತ್ತಿರಕ್ಕೆ ಬಂದಿದ್ದಾನೆಂದರೆ ಅವರಿಗೆ ನಂಬಿಕೆ ಬರಲಿಲ್ಲ. ಆ ಬಾಲಕ ಹೋದ ಜನ್ಮದಲ್ಲಿ ತಮ್ಮ ಮಗನೆಂದು ಒಪ್ಪಿಕೊಳ್ಳದೆ ಹೋಗಿರುವುದರಿಂದ ಆ ಬಾಲಕನಿಗೆ ಬೇಜಾರಾಗಿ ತಾನು ಗತ ಜನ್ಮದಲ್ಲಿ ಯಾಕ್ಸಿಡೆಂಟ್‌ಗೆ ಗುರಿಯಾದಾಗ ತನ್ನ ಹತ್ತಿರವಿರುವ ಪುಸ್ತಕಗಳ ಮೇಲೆ ರಕ್ತದ ಕಲೆಗಳು ಬಿದ್ದಿವೆಯೆಂದು, ತಾನು ಅಪಘಾತಕ್ಕೆ ಗುರಿಯಾದಾಗ ತನ್ನ ಜೇಬಿನಲ್ಲಿ 150 ರೂಪಾಯಿಗಳು ಇದ್ದವೆಂದು, ಆ ಹಣ ಯಾರೋ ಅಂಗಡಿಯವನಿಗೆ ಕೊಡಬೇಕಾಗಿತ್ತೆಂದು ಹೇಳಿದ್ದಾನೆ.

ಆ ಮಾತುಗಳು ಕೇಳಿದ ಆ ಬಾಲಕನ ಹಿಂದಿನ ಜನ್ಮದ ತಾಯಿ ಆತನು ತನ್ನ ಮಗನೇ ಎಂದು ನಂಬಿ ಭೋರೆಂದು ಅಳುತ್ತಾ ಒಣಗಿ ಹೋದ ರಕ್ತದ ಕಲೆಗಳಿರುವ ಸ್ಕೂಲು ಪುಸ್ತಕಗಳನ್ನು ತಂದು ಆತನಿಗೆ ತೋರಿಸಿದ್ದಾಳೆ. ಈ ವಿಧದಲ್ಲಿ ಹೊರಬಿದ್ದ ತರನ್‌ಜಿತ್‌ಸಿಂಗ್ ಎನ್ನುವ ಬಾಲಕನ ಪೂರ್ವ ಜನ್ಮದ ವೃತ್ತಾಂತವೆಲ್ಲಾ ಕೆಲವೇ ದಿನಗಳಲ್ಲಿ ಉತ್ತರ ಭಾರತದೇಶವೆಲ್ಲಾ ವ್ಯಾಪಿಸಿ ಹೋಗಿದೆ. ಈ ವಿಷಯವೆಲ್ಲಾ ಫೋರೆನ್ಸಿಕ್ ಸೈಂಟಿಸ್ಟ್ ಆದ ವಿಕ್ರಮ್‌ಸಿಂಗ್ ಚೌಹಾನ್‌ವರೆಗು ಹೋಗಿದೆ. ಮೊದಲು ಆತನು ಸಹ ಈ ವಿಷಯವನ್ನು

ನಂಬಲಿಲ್ಲ. ಆದರೂ ನಿಜಾನಿಜಗಳನ್ನು ಪ್ರಜೆಗಳಿಗೆ ತಿಳಿಸುವ ನಿಮಿತ್ತ ವಾಸ್ತವವೇನೋ ತಾನೆ ಸ್ವತಃವಾಗಿ ತಿಳಿದುಕೊಳ್ಳಬೇಕೆಂದು ನಿರ್ಣಯಕ್ಕೆ ಬಂದು ತರನ್‌ಜಿತ್‌ಸಿಂಗ್ ನನ್ನನ್ನು ಬೇಟಿಯಾಗಿ, ಆ ಬಾಲಕನು ಹೇಳಿದ ಹಿಂದಿನ ಜನ್ಮದ ತಾಯಿ ತಂದೆಯರನ್ನು ಸಹ ಬೇಟಿಯಾಗಿ ಮಾತನಾಡಿದ್ದಾನೆ. ಫೋರೆನ್ಸಿಕ್ ಸೈನ್ಸ್ ಆಧಾರವಾಗಿ ತರನ್‌ಜಿತ್‌ಸಿಂಗ್, ಪೂರ್ವಜನ್ಮದ ವೃತ್ತಾಂತದಲ್ಲಿನ ನಿಜಾನಿಜಗಳನ್ನು ತಿಳಿದುಕೊಳ್ಳಬೇಕೆಂದುಕೊಳ್ಳುತ್ತಾನೆ. ಆ ಬಾಲಕನು ಗತಜನ್ಮದಲ್ಲಿ ಸ್ಕೂಲು ವಿದ್ಯಾರ್ಥಿಯಾಗಿ ಇದ್ದಾಗ ಬರೆದ ನೋಟ್ ಪುಸ್ತಕವನ್ನು ತೆಗೆದುಕೊಳ್ಳುತ್ತಾನೆ. ಆ ಪುಸ್ತಕದಲ್ಲಿನ ಕೈ ಬರವಣೆಗೆಯನ್ನು ಈ ಜನ್ಮದಲ್ಲಿನ ತರನ್‌ಜಿತ್‌ಸಿಂಗ್ ಕೈ ಬರವಣಿಗೆಯನ್ನು ಹೋಲಿಸಿ ನೋಡಿದ್ದಾನೆ. ಮನುಷ್ಯರೆಲ್ಲರ ಕೈ ಬರವಣಿಗೆ ಒಂದೇ ತರಹ ಇರುವುದಿಲ್ಲ. ಅಷ್ಟೇ ಅಲ್ಲದೆ ಯಾವ ಇಬ್ಬರ ವ್ಯಕ್ತಿಗಳ ಕೈ ಬರವಣಿಗೆ ಸಹ ಒಂದೇ ವಿಧವಾಗಿ ಇರುವುದಿಲ್ಲ. ಆ ಕಾರಣದಿಂದ ಫೋರೆನ್ಸಿಕ್ ಸೈನ್ಸ್ ನಕಲಿ ಸಹಿಗಳನ್ನು ಗುರುತಿಸುತ್ತದೆ. ಸಹಜವಾಗಿ ಫೋರೆನ್ಸಿಕ್ ಸೈಂಟಿಸ್ಟ್ ಆದ ವಿಕ್ರಮರಾಜ್ ತನಗಿರುವ ಶಾಸ್ತ್ರ ಪರಿಜ್ಞಾನ ಆಧಾರವಾಗಿ ತರನ್‌ಜಿತ್‌ಸಿಂಗ್ ಹಿಂದಿನ ಜನ್ಮದ ಕೈ ಬರಹ, ಈ ಜನ್ಮದಲ್ಲಿನ ಕೈ ಬರಹ ಎರಡೂ ಅಚ್ಚಳಿಯದಂತೆ ಒಂದೇ ವಿಧವಾಗಿ ಇವೆಯೆಂದು ತಿಳಿದುಕೊಂಡಿದ್ದಾನೆ. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ಈ ಜನ್ಮದಲ್ಲಿ ತರನ್‌ಜಿತ್‌ಸಿಂಗ್ ಒಂದು ಕಡುಬಡವ ಕುಟುಂಬದಲ್ಲಿ ಜನ್ಮಿಸಿದ್ದರಿಂದ ಆತನಿಗೆ ಒಂದು ದಿನವಾದರೂ ಸ್ಕೂಲಿಗೆ ಹೋಗಿ ಅಕ್ಷರಗಳನ್ನು ಕಲಿತುಕೊಳ್ಳುವ ಅವಕಾಶವೇ ಬರಲಿಲ್ಲ. ಆ ವಿಷಯ ವಿಕ್ರಮ್‌ರಾಜ್‌ಸಿಂಗ್‌ಗೆ ತಿಳಿದಿಲ್ಲ. ಆತನು ಸಾಧಾರಣವಾಗಿ ಆ ಬಾಲಕನಿಗೆ ಕಾಗದ ಮೇಲೆ ಏನಾದರೂ ಬರೆಯಬೇಕೆಂದು ಕೇಳಿದಾಗ ಆ ಬಾಲಕನು ಇಂಗ್ಲೀಷ್‌ನಲ್ಲೂ, ಪಂಜಾಬಿನಲ್ಲು ಕೆಲವು ವಾಕ್ಯಗಳು ಬರೆದಿದ್ದಾನೆ. ಇದರಿಂದ ಹಿಂದಿನ ಜನ್ಮದಲ್ಲಿ ಕಲಿತುಕೊಂಡಿರುವುದೆ ಈಗಲು ಸಹ ಬಂದಿದೆಯೆಂದು ಅರ್ಥವಾಗುತ್ತಿದೆ.

ತರನ್‌ಜಿತ್‌ಸಿಂಗ್ ಎನ್ನುವ ಬಾಲಕನ ಪುನರ್ಜನ್ಮ ವಿಷಯದಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೇನೆಂದರೆ! ಪೂರ್ವಜನ್ಮಗಳು ಪ್ರತಿ

ಮನುಷ್ಯನಿಗೆ ಇವೆ. ಸೃಷ್ಠಿ ಆದಿಯಲ್ಲಿ ದೇವರು ಮನುಷ್ಯರನ್ನು ಸೃಷ್ಠಿಸಿದ್ದಾನೆ. ಹಾಗೆ ಸೃಷ್ಠಿಸಲ್ಪಟ್ಟಾಗ ಮನುಷ್ಯ ಹೊಸದಾಗಿ ಹುಟ್ಟುತ್ತಿದ್ದಾನೆ. ಆದರೆ ಮನುಷ್ಯನಿಗೆ ಸೃಷ್ಠಿ ಆದಿಯಲ್ಲಿಯೆ ಜನ್ಮ ಆಗಿದೆಯೆಂದು, ನಂತರ ಬಂದಿರುವವೆಲ್ಲ ಪುನರ್ಜನ್ಮಗಳೆ ಎಂದು ಮೊದಲೆ ಹೇಳಿದ್ದೇವೆ. ಆ ಲೆಕ್ಕದ ಪ್ರಕಾರ ನಿಮ್ಮದು, ನನ್ನದು ಪುನರ್ಜನ್ಮವೆ, ಆದರೆ ಹಿಂದಿನ ಜನ್ಮ ಏನೊ ನಿಮಗಾಗಲಿ, ನನಗಾಗಲಿ ತಿಳಿದಿಲ್ಲ. ತಿಳಿಯದೆ ಹೋಗುವುದಕ್ಕೆ ಕಾರಣ ಆ ಜನ್ಮ ಜ್ಞಾಪಕಗಳು ನಮಗೆ ಇಲ್ಲವಾದ್ದರಿಂದ ತಿಳಿದಿಲ್ಲ. ಹೋದ ಜನ್ಮ ತಿಳಿಯಬೇಕೆಂದರೆ ಅದನ್ನು ಆತ್ಮ ತಿಳಿಸಬೇಕು. ಹಾಗೆ ಆತ್ಮ ತಿಳಿಸುವುದನ್ನು ಆತ್ಮದವೊಂದು ಮೂರನೆ ಕೆಲಸವೆಂದು ಹೇಳಿಕೊಂಡಿದ್ದೇವೆ. ಆತ್ಮ ಸರ್ವ ಸ್ವತಂತ್ರವಾದದ್ದು. ಅದು ಒಬ್ಬನಿಗೆ ಹಿಂದಿನ ಜನ್ಮದ ಕೆಲವು ಜ್ಞಾಪಕಗಳನ್ನು ಮಾತ್ರ ತಿಳಿಯುವಂತೆ ಮಾಡಿ ಅವನದ್ದು ಪುನರ್ಜನ್ಮ ಎಂದು ತಿಳಿಯುವ ಹಾಗೆ ಮಾಡುತ್ತದೆ. ಅಷ್ಟೇ ಅಲ್ಲದೆ ಯಾರಿಗೊ ಒಬ್ಬನಿಗೆ ಪೂರ್ವಜನ್ಮ ಜ್ಞಾಪಕಗಳೊಂದಿಗೆ ಆ ಜನ್ಮದಲ್ಲಿನ ಅಭ್ಯಾಸಗಳನ್ನು ಸಹ ಅವನಿಗೆ ಬರುವಹಾಗೆ ಮಾಡುತ್ತಿದೆ. ಅಭ್ಯಾಸಗಳನ್ನೇ ಅಲ್ಲದೆ ಹೋದ ಜನ್ಮದಲ್ಲಿನ ಓದನ್ನು, ಬರವಣಿಗೆಯನ್ನು ಸಹ ತರನ್‌ಜಿತ್‌ಸಿಂಗ್‌ಗೆ ಬರುವಹಾಗೆ ಆತನ ಆತ್ಮ ಮಾಡಿದೆ. ಈ ವಿಧದಲ್ಲಿ ಪೂರ್ವಜನ್ಮ ಜ್ಞಾಪಕಗಳು ಬಂದಿರುವವರೆಲ್ಲರಿಗು ನಡೆಯುತ್ತದಾ ಎಂದರೆ ಹಾಗೆ ಎಲ್ಲ ಜ್ಞಾಪಕಗಳನ್ನು ಆತ್ಮ ಒದಗಿಸುತ್ತದೆಂದು ಹೇಳಲಾಗುವುದಿಲ್ಲ. ಕೆಲವರಿಗಾದರೆ ಪೂರ್ವಜನ್ಮದ ಜ್ಞಾಪಕ ಸ್ವಲ್ಪವಾದರೂ ಕೊಡದೆ ಗತ ಜನ್ಮದಲ್ಲಿನ ವಿದ್ಯೆಯನ್ನು ಮಾತ್ರ ಒದಗಿಸಬಲ್ಲದು. ಹಾಗೆ ಮಾಡುವುದರಿಂದ ಕೆಲವರು ಅಲ್ಲಲ್ಲಿ ಚಿಕ್ಕ ವಯಸ್ಸಿನಲ್ಲಿಯೆ ತಮ್ಮ ಸಂಗೀತ ಪ್ರಾವೀಣ್ಯತೆಯನ್ನು ತೋರಿಸುತ್ತಿದ್ದಾರೆ. ಹಾಗೆ ಕೆಲವು ವಿದ್ಯೆಗಳನ್ನು ಕಲಿತುಕೊಳ್ಳದೆ ಅವುಗಳಲ್ಲಿನ ಪಾಂಡಿತ್ಯವು ಕೆಲವರಲ್ಲಿ ಹೊರಬೀಳುತ್ತದೆ. ಅದಕ್ಕೆ ಪೂರ್ವಜನ್ಮ ಸಂಸ್ಕಾರವೆಂದು ಕೆಲವರು ಅನ್ನುತ್ತಿರುತ್ತಾರೆ. ಗಾಯಕನಾದ ಬಾಲ ಸುಬ್ರಮಣ್ಯಂ ರವರಿಗೆ ಸಂಗೀತ ಕಲಿತುಕೊಳ್ಳದೆ ಬಂದಿದೆ, ಕಲಿತಿರುವವರಿಗಿಂತ ಆತನು ಹೆಚ್ಚಿನ ಪ್ರಾವೀಣ್ಯತೆ ತೋರಿಸುತ್ತಿದ್ದಾನೆ. ಆದರೆ ಅದಕ್ಕೆ ಕಾರಣ ಆತನ ಆತ್ಮ ಎಂದು ಯಾರಿಗು ತಿಳಿದಿಲ್ಲ, ಆತನಿಗು ಸಹ ತಿಳಿದಿಲ್ಲ. ಈ ವಿಧದಲ್ಲಿ

ಆತ್ಮ ಹಿಂದಿನ ಜನ್ಮದಲ್ಲಿನ ಯಾವ ವಿಷಯವನ್ನಾದರು ನಂತರ ಜನ್ಮಕ್ಕೆ ಏರ್ಪಡಿಸುತ್ತದೆ.

ಮಾನವನ ಶರೀರದಲ್ಲಿ ಮೂರು ಭಾಗಗಳಾಗಿರುವ ಪರಮಾತ್ಮ, ಆತ್ಮ, ಜೀವಾತ್ಮಗಳಲ್ಲಿ ಪರಮಾತ್ಮ (ದೇವರು) ಯಾವ ಕೆಲಸವನ್ನು ಮಾಡುವುದಿಲ್ಲವೆಂದು, ರೂಪ, ನಾಮ, ಕ್ರಿಯೆಗಳು ಇಲ್ಲದವನೆಂದು ಹೇಳಿಕೊಂಡಿದ್ದೇವೆ. ಹಾಗೆಯೇ ಕೊನೆಯದಾದ ಜೀವಾತ್ಮ ಸಹ ಯಾವ ಕೆಲಸವನ್ನು ಮಾಡುವುದಿಲ್ಲ, ಆದರೆ ಅನುಭವಿಸುವುದು ಮಾತ್ರವಿದೆ. ಜೀವಾತ್ಮ ಎಲ್ಲ ವಿಧಗಳಲ್ಲಿ ಕುರುಡನೆ! ಅವನಿಗೆ ಏನು ತಿಳಿದಿಲ್ಲ, ಏನು ಮಾಡುವುದಿಲ್ಲ. ಆದರೆ ಜೀವಾತ್ಮನಿಗೆ ಆಕಾರವು ಇದೆ, ಅನುಭವವೂ ಇದೆ. ಇನ್ನು ಎರಡನೆಯದಾದ ಆತ್ಮದ ವಿಷಯಕ್ಕೆ ಬಂದರೆ, ಆತ್ಮ ಶರೀರದಲ್ಲಿ ಇದ್ದರೂ ಯಾರು ಅದನ್ನು ಗುರುತಿಸದ ಹಾಗೆ ಇದೆ. ಶರೀರದಲ್ಲಿನ ಜೀವಾತ್ಮ, ಪರಮಾತ್ಮ ಎರಡೂ ಕೆಲಸ ಮಾಡದಿದ್ದರೂ ಆತ್ಮ ಮಾತ್ರ ಒಂದು ಕ್ಷಣ ಸಹ ಸುಮ್ಮನಿರದೆ ಕೆಲಸ ಮಾಡುತ್ತಿದೆ. ಕೆಲವರು ಆಧ್ಯಾತ್ಮಿಕ ಮಾರ್ಗದಲ್ಲಿ ಪ್ರಯಾಣಿಸುವವರು ಆತ್ಮ ಎನ್ನುವ ಶಬ್ದವನ್ನು ಅನೇಕ ಸಲ ತಮ್ಮ ಮಾತುಗಳಲ್ಲಿ ಮಾತನಾಡುತ್ತಿದ್ದರೂ, ಆತ್ಮ ಪ್ರತ್ಯೇಕವಾದದ್ದೆಂದು ಅವರಿಗೂ ತಿಳಿಯದೆ ಹೋಗಿದೆ. ಆತ್ಮವನ್ನು ಬಹಳ ಜನ ಆಕಡೆ ಪರಮಾತ್ಮನಾಗಿಯೊ ಅಥವಾ ಜೀವಾತ್ಮನಾಗಿಯೊ ಹೋಲಿಸಿಕೊಳ್ಳುತ್ತಿದ್ದಾರೆ ವಿನಹ, ಆತ್ಮ ಎಂದರೆ ಶರೀರದಲ್ಲಿ ಜೀವಾತ್ಮನಿಗೆ ಯಾವಾಗಲೂ ಜೊತೆಯಾಗಿರುವ ಪ್ರತ್ಯೇಕವಾದ ಕಾರ್ಯಾಚರಣೆ ಇರುವುದೆಂದು ಯಾರೂ ತಿಳಿಸದೆ ಹೋಗಿದ್ದಾರೆ. ಆತ್ಮ ಒಂದರ ಕಾರ್ಯಾಚರಣೆಗಳು ಒಟ್ಟು ಮೂರು ವಿಧಗಳೆಂದು ಸಹ ತಿಳಿಯದೆ ಹೋಗಿದ್ದಾರೆ. ಈಗ ನಾವು ಆತ್ಮದವೊಂದು ಮೂರನೇ ಕಾರ್ಯಾಚರಣೆಯನ್ನು ಕುರಿತು ಹೇಳಿಕೊಳ್ಳುತ್ತಿದ್ದೇವೆ. ಆತ್ಮದ ಮೂರನೇ ಕೆಲಸದಲ್ಲಿಯೇ ಪುನರ್ಜನ್ಮ ವಿಷಯಗಳು ಮನುಷ್ಯನಿಂದ ಹೊರಬೀಳುತ್ತವೆಂದು ಸಹ ತಿಳಿದುಕೊಂಡಿದ್ದೇವೆ. ಆತ್ಮ ಹೊರಗಿನ ವ್ಯಕ್ತಿಗಳೊಂದಿಗಾಗಲಿ, ಹೊರಗಿನ ಪ್ರದೇಶಗಳೊಂದಿಗಾಗಲಿ ಗತ ಜನ್ಮಗಳಲ್ಲಿದ್ದ ಸಂಬಂಧವನ್ನು ತಿಳಿಸಿದಾಗಲೆ ಮನುಷ್ಯನಿಗೆ ಪುನರ್ಜನ್ಮ

ಇದೆಯೆಂದು ಅರ್ಥವಾಗುತ್ತಿದೆ. ಒಂದುವೇಳೆ ಆತ್ಮ ತನ್ನ ಮೂರನೇ ಕೆಲಸದಲ್ಲಿ ಗತಜನ್ಮದಲ್ಲಿನ ವ್ಯಕ್ತಿಗಳೊಂದಿಗಾಗಲಿ, ಪ್ರದೇಶಗಳೊಂದಿಗಾಗಲಿ ಇರುವ ಸಂಬಂಧಗಳನ್ನು ತಿಳಿಸದೆ, ಗತಜನ್ಮದಲ್ಲಿನ ಕೇವಲ ಶರೀರ ಅಂತರ್ಗತದಲ್ಲಿನ ವಿದ್ಯೆಗಳನ್ನಾಗಲಿ, ಅಭ್ಯಾಸಗಳನ್ನಾಗಲಿ, ಪಾಂಡಿತ್ಯವನ್ನಾಗಲಿ, ಭಾಷೆಗಳನ್ನಾಗಲಿ ಮೇಧಾಶಕ್ತಿಯನ್ನಾಗಲಿ ತಿಳಿಸಿದಾಗ, ಅಂತಹ ವಿಷಯಗಳ ಆಧಾರದಿಂದ ಪುನರ್ಜನ್ಮಗಳು ಇವೆಯೆಂದು ತಿಳಿದುಕೊಳ್ಳದೆ ಹೋಗುತ್ತಿದ್ದಾರೆ. ಅಷ್ಟೇ ಅಲ್ಲದೆ ಶರೀರದಲ್ಲಿನ ವಿಷಯಗಳೇ ಅಲ್ಲದೆ, ಶರೀರದ ಮೇಲೆ ಬಂದಿರುವ ಗುರುತು ಗಳಿಂದಲು ಸಹ ಪೂರ್ವಜನ್ಮಗಳಿವೆಯೆಂದು, ಪ್ರಸ್ತುತವಿರುವುದು ತನ್ನದು ಪುನರ್ಜನ್ಮ ಎಂದು ಯಾರೂ ತಿಳಿಯದೆ ಹೋಗುತ್ತಿದ್ದಾರೆ. ಹಿಂದಿನ ಜನ್ಮಗಳು ಇವೆಯೆಂದು ಮನುಷ್ಯರು ತಿಳಿದುಕೊಳ್ಳುವುದಕ್ಕೆ ಆತ್ಮ ಆಗಾಗ ಯಾರಲ್ಲಿಯೊ ಒಬ್ಬರಲ್ಲಿ ಹಿಂದಿನ ಜನ್ಮದಲ್ಲಿನ ಅಂತರ್ಗತ ಜ್ಞಾಪಕಗಳಾಗಲಿ, ಬಹಿರ್ಗತ ಜ್ಞಾಪಕಗಳಾಗಲಿ ತಿಳಿಯುವಂತೆ ಮಾಡುತ್ತಿದೆ. ಹಾಗೆ ತಿಳಿಸುವುದೇ ಅಲ್ಲದೆ ಕೆಲವರಿಗೆ ಶರೀರದ ಮೇಲೆ ಹಿಂದಿನ ಜನ್ಮದಲ್ಲಿನ ಗುರುತುಗಳನ್ನು ಸಹ ಇನ್ನೊಂದು ಜನ್ಮದಲ್ಲಿ ಬರುವಹಾಗೆ ಮಾಡುತ್ತಿದೆ. ಅಂತಹ ಸಂಘಟನೆಯನ್ನು ಕೆಳಗೆ ವಿವರಿಸಿಕೊಳ್ಳೋಣ.

ಇಂಗ್ಲೆಂಡ್‌ನಲ್ಲಿ "ಹೆಕ್ಸ್‌ಹೇಮ್" ಎಂಬ ನಗರದಲ್ಲಿ ನಿವಾಸವಿರುವ ಜಾನ್‌ಪೋಲ್ಲಾಕ್ ಮತ್ತು ಫ್ಲೋರೆನ್ಸ್ ಎನ್ನುವ ದಂಪತಿಗಳಿಗೆ ಇಬ್ಬರು ಹೆಣ್ಣು ಮಕ್ಕಳು ಇದ್ದರು. ದೊಡ್ಡವಳ ಹೆಸರು ಜುನ್ನಾ, ಎರಡನೆಯವಳ ಹೆಸರು ಜಾಕ್ವಿಲಿನ್. ದೊಡ್ಡವಳ ಜುನ್ನಾ ವಯಸ್ಸು 11 ವರ್ಷಗಳು, ಚಿಕ್ಕವಳು ಜಾಕ್ವಿಲಿನ್ ವಯಸ್ಸು 6 ವರ್ಷಗಳು. ಆನಂದವಾಗಿ ಸಾಗಿಹೋಗುತ್ತಿದ್ದ ಜಾನ್‌ಪೋಲ್ಲಾಕ್ ಕುಟುಂಬದಲ್ಲಿ ಇದ್ದಕ್ಕಿದ್ದಂತೆ ಒಂದು ವಿಷಾದವು ನಡೆದುಹೋಗಿದೆ. 1957ನೆ ಸಂವತ್ಸರ, ಮೇ 5ನೆ ತಾರೀಖಿನಂದು ಇಬ್ಬರು ಹುಡಿಗಿಯರು ಸ್ಕೂಲಿಗೆ ಹೊರಟುಹೋಗಿದ್ದಾರೆ. ಹಾಗೆ ಹೋದವರು ಪುನಃ ಮನೆಗೆ ಬರಲಿಲ್ಲ. ರಸ್ತೆ ಅಪಘಾತದಲ್ಲಿ ಜುನ್ನಾ, ಜಾಕ್ವಿಲಿನ್ ಇಬ್ಬರೂ ಮರಣಿಸಿದ್ದರು. ಅದು ಪೋಲ್ಲಾಕ್

ಕುಟುಂಬದಲ್ಲಿ ಅದು ಚೇತರಿಸಿಕೊಳ್ಳದ ವಿಷಾದವಾಗಿದೆ. ಕೆಲವು ತಿಂಗಳುಗಳು ಆ ವಿಷಾದದಿಂದ ಆ ಕುಟುಂಬ ಹೊರಬೀಳದೆ ಹೋಗಿದೆ. ನಂತರ ಸುಮಾರು ಒಂದೂವರೆ ಸಂವತ್ಸರಕ್ಕೆ ಅಂದರೆ 1958, ಅಕ್ಟೋಬರ್ 4ನೆ ತಾರೀಖಿಗೆ ಫ್ಲೋರೆನ್ಸ್‌ಗೆ ಅವಳಿಜವಳಿ ಮಕ್ಕಳು ಜನ್ಮಿಸಿದ್ದಾರೆ. ಹುಟ್ಟಿದವರು ಇಬ್ಬರೂ ಹೆಣ್ಣುಮಕ್ಕಳು ಆಗಿರುವುದು ವಿಶೇಷವಾದಾಗ, ಅವರಲ್ಲಿ ಮತ್ತೊಂದು ವಿಚಿತ್ರ ಕಾಣಿಸಿದೆ. ಅದೇನೆಂದರೆ ಹುಟ್ಟಿದ ಇಬ್ಬರು ಅವಳಿಜವಳಿಯಲ್ಲಿ ಚಿಕ್ಕವಳಿಗೆ ಹಣಿಯ ಮೇಲೆ ಚಿಕ್ಕ ಗುರುತು (ಗಾಯ ಮಾದಿರುವ ಗುರುತು) ಇರುವುದು ಕಾಣಿಸಿದೆ. ಜಾನ್ ಫ್ಲೋರೆನ್ಸ್ ಕುಟುಂಬದಲ್ಲಿ ಸತ್ತುಹೋದ ಇಬ್ಬರು ಹೆಣ್ಣು ಮಕ್ಕಳಲ್ಲಿ ಚಿಕ್ಕವಳು ಜಾಕ್ವಿಲಿನ್‌ಗೆ ಸರಿಯಾಗಿ ಹಣೆಯಮೇಲೆ ಗಾಯ ಮಾದಿರುವ ಗುರುತು ಇತ್ತು. ಒಂದು ಸಮಯದಲ್ಲಿ ಚಿಕ್ಕವಳು ಜಾಕ್ವಿಲಿನ್ ಸೈಕಲ್ ತುಳಿಯುವಾಗ ಕೆಳಕ್ಕೆ ಬಿದ್ದು ಹಣಿಯ ಮೇಲೆ ಗಾಯವಾಗಿತ್ತು. ಈಗ ಹುಟ್ಟಿದ ಚಿಕ್ಕ ಮಗುವಿಗೂ ಸಹ ಹಣೆಯ ಮೇಲೆ ಅದೇ ಜಾಗದಲ್ಲಿ ಗಾಯದ ಗುರುತು ಬಂದಿರುವುದು ಗುರ್ತಿಸಬೇಕಾದ ವಿಷಯ. ಹಾಗೆ ಬಂದಿರುವ ಗಾಯದ ಮಚ್ಚೆ ಆಕೆಯ ಹಿಂದಿನ ಜನ್ಮದೆಂದು ತಾಯಿತಂದೆಯರು ಗುರ್ತಿಸದೆ ಹೋಗಿದ್ದಾರೆ. ಆ ಮಚ್ಚೆಯಲ್ಲಿ ಹಿಂದಿನ ಜನ್ಮ ಸಂಬಂಧದ ಮರ್ಮವಿದೆಯೆಂದು ತಿಳಿದುಕೊಳ್ಳದೆ ಹೋಗಿದ್ದಾರೆ.

ಹುಟ್ಟಿದ ಅವಳಿಜವಳಿ ಮಕ್ಕಳಿಗೆ ನಾಲ್ಕು ತಿಂಗಳ ವಯಸ್ಸು ಬಂದಾಗ ಪೋಲ್ಲಾಕ್ ಕುಟುಂಬವು ತಾವು ನಿವಾಸಿಸುತ್ತಿರುವ ಹೆಕ್ಸ್‌ಹೇಮ್ ನಗರವನ್ನು ಬಿಟ್ಟು ಅಲ್ಲಿಂದ 40 ಕಿಲೋಮೀಟರ್ ದೂರದಲ್ಲಿರುವ "ವೈಟ್‌ಕಿಬೇ" ಎನ್ನುವ ಗ್ರಾಮಕ್ಕೆ ಹೋಗಿದ್ದಾರೆ. ನಂತರ ನಾಲ್ಕು ಸಂವತ್ಸರಗಳು ಅವರು ತಿರುಗಿ ಹೆಕ್ಸ್‌ಹೇಮ್ ನಗರಕ್ಕೆ ಬರಲಿಲ್ಲ. ನಂತರ ಒಂದು ದಿನ ಪೋಲ್ಲಾಕ್ ಕುಟುಂಬ ಇಬ್ಬರು ಮಕ್ಕಳೊಂದಿಗೆ ಸಹ ಹೆಕ್ಸ್‌ಹೇಮ್ ನಗರಕ್ಕೆ ಬಂದಿದ್ದಾರೆ. ಹಾಗೆ ಅವರು ಬಂದ ತಕ್ಷಣವೆ ನಾಲ್ಕು ಸಂವತ್ಸರಗಳ ವಯಸ್ಸಿರುವ ಇಬ್ಬರು ಮಕ್ಕಳು ಹಿಂದಿನ ಜನ್ಮದಲ್ಲಿ ತಾವು ನಿವಾಸಿಸುತ್ತಿದ್ದ ಮನೆಯನ್ನು ಗುರುತಿಸಿದ್ದಾರೆ. ಅದರಲ್ಲಿ

ತಾವಿದ್ದ ಕೋಣೆಗಳನ್ನು, ತಾವು ಆಟವಾಡುತ್ತಿದ್ದ ಜಾಗವನ್ನು ಗುರುತಿಸುತ್ತಾರೆ. ಅಷ್ಟೇ ಅಲ್ಲದೆ ಅವರು ಓದುತ್ತಿದ್ದ ಶಾಲೆಯನ್ನುಸಹ ಗುರುತಿಸಿ ಹೇಳಿದ್ದಾರೆ. ಅದರಿಂದ ಅವರಿಬ್ಬರು ಹಿಂದಿನ ಜನ್ಮದಲ್ಲಿನ ನಮ್ಮ ಮಕ್ಕಳೆ ಎಂದು ತಾಯಿ ತಂದೆಯರು ತಿಳಿದುಕೊಂಡಿದ್ದಾರೆ. ಇಲ್ಲಿ ಈ ಸಂಘಟನೆಯಲ್ಲಿ ಚಿಕ್ಕ ಮಗಳಿಗೆ ಗತಜನ್ಮದಲ್ಲಿ ಆದ ಗಾಯದ ಗುರುತು ಎರಡನೇ ಜನ್ಮದಲ್ಲಿ ಅದೇ ಚಿಕ್ಕಮಗಳಿಗೆ ಬಂದಿರುವುದನ್ನು ನಾವು ವಿಶೇಷವಾಗಿ ಗುರುತಿಸಬಹುದು. ಇಂತಹ ಸಂಘಟನೆಯನ್ನೆ ಮತ್ತೊಂದನ್ನು ವಿವರಿಸುತ್ತೇವೆ ನೋಡಿರಿ.

ಸ್ಟೀವೆನ್‌ಸನ್ ಎನ್ನುವ ಅಮೆರಿಕಾ ಶಾಸ್ತ್ರಜ್ಞರು ಭಾರತದೇಶದಲ್ಲಿನ ಒಬ್ಬ ಬಾಲಕನ ಪುನರ್ಜನ್ಮವನ್ನು ಕುರಿತು ಪರಿಶೋಧಿಸಿರುವುದು ನಡೆದಿದೆ. ಆತನು ಪರಿಶೀಲಿಸಿದವರಲ್ಲಿ ಒಬ್ಬ ವ್ಯಕ್ತಿ ಪೂರ್ವ ಜನ್ಮದಲ್ಲಿ ಸೈನಿಕನಾಗಿ ಕೆಲಸ ಮಾಡಿದ್ದಾನಂತೆ. ಒಂದು ಸಂದರ್ಭದಲ್ಲಿ ಶತ್ರುಗಳು ಆತನನ್ನು ಷಾಟ್‌ಗನ್‌ನಿಂದ ಬಹಳ ಹತ್ತಿರದಿಂದ ಸುಟ್ಟಿದ್ದರಂತೆ. ಆಗ ಆತನ ಎದೆಯೊಳಗೆ ಬುಲ್ಲೆಟ್ ತೂರಿಹೋಗಿ ಮರಣಿಸಿದ್ದಾನಂತೆ. ಅ ವಿಧದಲ್ಲಿ ಸಾಯಿಸಲ್ಪಟ್ಟ ವ್ಯಕ್ತಿ ಪುನಃ ಮಹಾರಾಮ್ ಎಂಬ ವ್ಯಕ್ತಿಯಾಗಿ ಜನ್ಮಿಸಿದ್ದಾನೆ. ಆಶ್ಚರ್ಯಕರವಾದ ವಿಷಯವೇನೆಂದರೆ ತಿರುಗಿ ಜನ್ಮಸಿದ ಮಹಾರಾಮ್ ಎನ್ನುವ ಬಾಲಕನನ್ನು ಎದೆಯ ಮಧ್ಯಭಾಗದಲ್ಲಿ ಷಾಟ್‌ಗನ್‌ನ ಬುಲ್ಲೆಟ್ ಇಳಿದರೆ ಹೇಗಿರುತ್ತದೊ, ಅಂತಹ ಆಕಾರದಲ್ಲಿ ವಿಚಿತ್ರವಾದ ದೊಡ್ಡ ಹುಟ್ಟುಮಚ್ಚೆ ಇದೆ. ಸ್ಟೀವೆನ್‌ಸನ್ ಮಹಾರಾಮ್ ಎನ್ನುವ ಬಾಲಕನ ವೃತ್ತಾಂತವನ್ನು ಆಳವಾಗಿ ಪರಿಶೀಲಿಸಿ ಮಹಾರಾಮ್ ಹೇಳಿದ ಹಿಂದಿನ ಜನ್ಮದ ವಿಷಯಗಳೆಲ್ಲ ನಿಜವೆಂದು ಆತನದು ಪುನರ್ಜನ್ಮವೆಂದು ಸಾಬೀತು ಮಾಡಿಕೊಂಡಿದ್ದಾನೆ. ಇದೇ ವಿಧವಾಗಿ ಸ್ಟೀವೆನ್‌ಸನ್ ಥಾಯ್‌ಲ್ಯಾಂಡ್ ದೇಶದಲ್ಲಿ ಪೂರ್ವಜನ್ಮ ಜ್ಞಾಪಕಗಳು ಬಂದಿರುವ ಒಬ್ಬ ಹುಡುಗನನ್ನು ಭೇಟಿಮಾಡಿ, ಆತನ ಹಿಂದಿನ ಜನ್ಮ ಜ್ಞಾಪಕಗಳನ್ನು ಪರಿಶೀಲಿಸಿದ್ದಾನೆ. ಆ ಬಾಲಕನು ಹಿಂದಿನ ಜನ್ಮದಲ್ಲಿ ತನ್ನ ಚಿಕ್ಕಪ್ಪನಿಂದ ತಲೆಯ ಹಿಂದಿನ ಭಾಗದಲ್ಲಿ ಹಿಡಿಕತ್ತಿಯಿಂದ ಇರಿದು ದಾರುಣವಾಗಿ ಹತ್ಯೆಗೀಡಾಗಿದ್ದೇ

ನೆಂದು ತಿಳಿದುಕೊಂಡಿದ್ದಾನೆ. ಹಾಗೆ ಆತನು ಸತ್ತು ಹೋಗಿರುವುದರಿಂದ ಆತನು ಹುಟ್ಟಿದ ಎರಡನೇ ಜನ್ಮದಲ್ಲಿ ಆತನ ಶರೀರದ ಮೇಲೆ ತಲೆ ಹಿಂದಿನ ಭಾಗದಲ್ಲಿ ದೊಡ್ಡ ಗಾಯದ ಆಕಾರದಲ್ಲಿ ಹುಟ್ಟುಮಚ್ಚೆಯಂತಹ ಆಕಾರ ಏರ್ಪಟ್ಟು ಇರುವುದನ್ನು ಸ್ಟೀವೆನ್‌ಸನ್ ಗಮನಿಸಿದ್ದಾನೆ. ಈ ವಿಧದಲ್ಲಿ ಪುನರ್ಜನ್ಮಗಳ ಪರಿಶೋದಕನಾಗಿ ಸ್ಟೀವೆನ್ ಬಹಳ ಜನರಿಗೆ ಹಿಂದಿನ ಜನ್ಮದಲ್ಲಿನ ಯಾವುದೋ ಒಂದು ಗುರುತು ಎರಡನೇ ಜನ್ಮದೊಳಗೆ ಮಚ್ಚೆಗಳ ರೂಪದಲ್ಲಿ ಬರುವುದನ್ನು ನೋಡಿದ್ದಾನೆ. ಒಂದು ಶರೀರದಲ್ಲಿ ಒಂದು ಕಾರಣದಿಂದ ಏರ್ಪಟ್ಟಿರುವ ಮಚ್ಚೆ ಆ ಕಾರಣವನ್ನು ಸೂಚಿಸುವ ಗುರುತುಗಳಂತೆ, ನಂತರ ಬರುವ ಜನ್ಮಗಳಲ್ಲಿ ಶರೀರದ ಮೇಲೆ ಕೆಲವು ಜನ್ಮಗಳವರೆಗಾಗಲಿ ಅಥವಾ ಅನೇಕ ಜನ್ಮಗಳವರೆಗಾಗಲಿ ಏರ್ಪಡುತ್ತಾ ಬರುವಂತೆ ಆತ್ಮ ಮಾಡುತ್ತದೆ. ಪ್ರತಿ ಶರೀರಕ್ಕು ಹುಟ್ಟಿನಿಂದಲೆ ಯಾವುದೊ ಒಂದು ಮಚ್ಚೆ ಇರುತ್ತದೆ. ಮತ್ಸ ಅಥವಾ ಮಚ್ಚೆ ಎನ್ನುವುದು ಆತ್ಮ ತಿಳಿಸುವ ಜೀವಾತ್ಮನವೊಂದರ ಹಿಂದಿನ ಜನ್ಮದ ಗುರುತೇ ಅಲ್ಲದೆ, ಶರೀರ ದೇವರ (ಪರಮಾತ್ಮ) ಸ್ಥಾನವಾಗಿ ಇದೆಯೆಂದು ತಿಳಿಸುವ ಗುರುತಾಗಿ ಸಹ ಇದೆ. ಮತ್ಸ ಎನ್ನುವುದು ಒಂದು ವಿಧದಲ್ಲಿ ಹಿಂದಿನ ಜನ್ಮದಲ್ಲಿನ ಪ್ರಕೃತಿಯ ಶರೀರವನ್ನು ಗುರುತು ಮಾಡುವುದೆ ಅಲ್ಲದೆ, ಒಂದು ವಿಧದಲ್ಲಿ ಪರಮಾತ್ಮನವೊಂದು ಇರುವಿಕೆ ಶರೀರದಲ್ಲಿ ಸಹ ಇದೆಯೆಂದು ತಿಳಿಸುತ್ತಿದೆ.

ಪುನರ್ಜನ್ಮದಲ್ಲಿ ಮತ್ತೊಂದು ಮುಖ್ಯವಾದ ವಿಷಯವನ್ನು ಪರಿಶೀಲಿಸಿ ನೋಡೋಣ. ಅದೇನೆಂದರೆ! ಒಬ್ಬ ವ್ಯಕ್ತಿ ಸತ್ತುಹೋದ ನಂತರ ಸ್ವಲ್ಪ ಕಾಲಕ್ಕೆ ಪುನಃ ಹುಟ್ಟಿದಂತೆ ಕೆಲವರಿಗೆ ಬಂದಿರುವ ಪುನರ್ಜನ್ಮ ಜ್ಞಾಪಕಗಳಿಂದ ತಿಳಿದುಹೋಗಿದೆ. ಆದರೆ ಸತ್ತುಹೋದ ನಂತರ ಎಷ್ಟು ಕಾಲಕ್ಕೆ ಅವರು ಹುಟ್ಟಿದ್ದಾರೆ? ಹಾಗೆ ಸ್ವಲ್ಪಕಾಲದ ನಂತರ ಹುಟ್ಟುವುದಕ್ಕೆ ಕಾರಣವೇನು? ಸತ್ತುಹೋದ ನಂತರ ಪುನಃ ಹುಟ್ಟಿದ ಕಾಲ ಎಲ್ಲರಿಗೂ ಒಂದೇ ವಿಧವಾಗಿ ಇದೆಯಾ? ಎಂದು ಪ್ರಶ್ನಿಸಿಕೊಂಡು ನೋಡಿದರೆ ಇನ್ನೂ ಸ್ವಲ್ಪ ಆಸಕ್ತಿಕರವಾದ ಜ್ಞಾನ ತಿಳಿಯುತ್ತದೆ. ಇಲ್ಲಿಯ ವರೆಗು ನಾವು ತಿಳಿದುಕೊಂಡ ಕೆಲವರ

ಪುನರ್ಜನ್ಮಗಳ ಸಮಾಚಾರದಲ್ಲಿ ಅವರು ಮತ್ತೆ ಹುಟ್ಟಿದ ಕಾಲ ಒಂದೇ ಪರಿಮಿತಿಯಾಗಿ ಇಲ್ಲ. ಒಬ್ಬರು ಸಂವತ್ಸರದ ನಂತರ ಹುಟ್ಟಿದರೆ, ಇನ್ನೊಬ್ಬರು ಐದು ಸಂವತ್ಸರಗಳ ನಂತರ ಹುಟ್ಟಿದ್ದಾರೆ. ಹೀಗೆ ಒಂದು ಕಾಲಪರಿಮಿತಿ ಎನ್ನುವುದು ಇಲ್ಲದೆ, ಅನೇಕ ಜನ ಅನೇಕ ವಿಧಗಳ ಕಾಲಗಳಲ್ಲಿ ಹುಟ್ಟಿದ್ದಾರೆ. ಈಗ ಕಾಲಪರಿಮಿತಿ ಮೇಲೆ ದೃಷ್ಠಿ ಇಟ್ಟು ಬೇರೆ ಬೇರೆ ಕಾಲಗಳಲ್ಲಿ ಮತ್ತೆ ಜನ್ಮಗಳು ತೆಗೆದುಕೊಂಡವರನ್ನು ಕುರಿತು ವಿವರಿಸಿಕೊಂಡು ನೋಡೋಣ.

ಪ್ರಖ್ಯಾತ ಅಮೆರಿಕನ್ ಪಾರಾ ಸೈಕಾಲಜಿಸ್ಟ್ ಸ್ಟೀವೆನ್‌ಸನ್ ಸಹಚರನು ಆದ ಪ್ರೊಫೆಸರ್ ಹೆಚ್.ಎನ್.ಬೆನರ್ಜೀ ಭಾರತದೇಶದಲ್ಲಿ ಮೊದಲ ಪಾರಾ ಸೈಕಾಲಜಿಸ್ಟ್ ಎಂದು ಬಹಳ ಜನರಿಗೆ ತಿಳಿದಿಲ್ಲ. ಅಂತಹ ಹೆಚ್.ಎನ್.ಬೆನರ್ಜೀ ಸ್ವತಃವಾಗಿ ಪರಿಶೋಧಿಸಿ ಪೂರ್ವಜನ್ಮ ಜ್ಞಾಪಕಗಳು ಬಂದಿರುವ ಒಬ್ಬ ಬಾಲಕಿಯ ವೃತ್ತಾಂತವನ್ನು ಪ್ರಪಂಚಕ್ಕೆ ತಿಳಿಸಿದ್ದಾನೆ. ಮಧ್ಯಪ್ರದೇಶ್ ರಾಜ್ಯದಲ್ಲಿನ ಛತ್ರಾಪೂರ್ ಪಟ್ಟಣದಲ್ಲಿ ಒಬ್ಬ ಸಾಂಪ್ರದಾಯ ಮತ್ತು ಸಂಪನ್ನೆ ಬ್ರಾಹ್ಮಣ ಕುಟುಂಬದಲ್ಲಿ ಸ್ವರ್ಣಲತ ಮಿಶ್ರಾ ಎಂಬ ಹೆಸರಿರುವ ಹುಡುಗಿ 1948ರಲ್ಲಿ ಜನ್ಮಿಸಿದ್ದಾಳೆ. ಆಕೆಗೆ ಮೂರು ಸಂವತ್ಸರಗಳ ವಯಸ್ಸಿರುವಾಗ ಅವಳ ತಂದೆ ಆಕೆಯನ್ನು ತೆಗೆದುಕೊಂಡು ಅಲ್ಲಿಂದ 160 ಕಿಲೋಮೀಟರ್‌ಗಳ ದೂರದಲ್ಲಿರುವ ಅವರ ಸ್ವಂತ ಊರಾದ ಕಾಟ್ನೆ ಎನ್ನುವ ಪಟ್ಟಣಕ್ಕೆ ಹೋಗುತ್ತಾರೆ. ಆಗ ಸ್ವರ್ಣಲತ ಮಿಶ್ರಾ ಕಾಟ್ನೆ ಪಟ್ಟಣ ಶಿವಾರು ಪ್ರಾಂತ್ಯದಿಂದ ಒಂದುಕಡೆ ಹೋಗುವ ರಹದಾರಿಯನ್ನು ತನ್ನ ತಂದೆಗೆ ತೋರಿಸಿ, ಆ ರಸ್ತೆ ಹಿಂದೆ ಹೋದರೆ "ಜುರುಕುಟಿಯಾ" ಎನ್ನುವ ಗ್ರಾಮ ಬರುತ್ತದೆಂದು ಹೇಳಿದಳು. ಎಂದೂ ಮನೆದಾಟಿ ಹೋಗದ ತನ್ನ ಮಗಳು, ಅದರಲ್ಲಿಯು ಮೂರು ಸಂವತ್ಸರಗಳ ವಯಸ್ಸು ಸಹ ಪೂರ್ತಿಆಗದ ಮಗು ತನ್ನ ಊರಿಗೆ 160 ಕಿಲೋಮೀಟರುಗಳ ದೂರದಲ್ಲಿರುವ ಇನ್ನೊಂದು ಊರಿಗೆ ಹೋಗುವ ಮಾರ್ಗವನ್ನು ಹೇಗೆ ತಿಳಿದುಕೊಂಡಿದ್ದಾಳೆಂದು ಆಶ್ಚರ್ಯಪಡುತ್ತಾನೆ.

ತಂದೆ ಏನೋ ಮಾತನಾಡಬೇಕೆಂದು ಬಾಯಿ ತೆಗೆಯುವಷ್ಟರಲ್ಲಿ ಸ್ವರ್ಣಲತ ತನ್ನ ತಂದೆಯ ಹತ್ತಿರ ನಾನು ಹಿಂದಿನಜನ್ಮದಲ್ಲಿ ಜುರುಕುಟಿಯಾ ಗ್ರಾಮದಲ್ಲಿ ಜೀವಿಸುತ್ತಿದ್ದೆನೆಂದು, ತನ್ನ ಹೆಸರು ಬಿಯಾಪಾಠಕ್ ಎಂದು, ತನಗೆ ಗಂಡ ಇಬ್ಬರು ಮಕ್ಕಳು ಇದ್ದರೆಂದು, ತನ್ನ ಗಂಡನ ಹೆಸರು ಚಿಂತಾಮಣಿ ಪಾಂಡೇ ಎಂದು, ತನಗೆ ಕುತ್ತಿಗೆಯಲ್ಲಿ ಬಂದ ತೀವ್ರವಾದ ನೋವಿಗೆ ಜಬಲ್‌ಪೂರ್ ಪಟ್ಟಣದಲ್ಲಿನ ಎಸ್.ಸಿ.ಭಾರತ್ ಎನ್ನುವ ಡಾಕ್ಟರು ವೈದ್ಯ ಮಾಡಿದ್ದನೆಂದು, ಆದರೆ ತನಗೆ ರೋಗ ಹೆಚ್ಚಾಗಿ 1939 ರಲ್ಲಿ ಮರಣಿಸಿದ್ದೆನೆಂದು ಬಂದು ಬಾರದ ಮಾತುಗಳಲ್ಲಿ ಹೇಳಿದಳು. ಆಕೆ ಹೇಳಿದ ಮಾತುಗಳನ್ನು ಬಹಳ ಆಸಕ್ತಿಯಿಂದ ಕೇಳಿದ ಆಕೆಯ ತಂದೆ ಅವಳು ಹೇಳಿದ ಮಾತುಗಳಲ್ಲಿ ನಿಜಾನಿಜಗಳನ್ನು ತಿಳಿದುಕೊಳ್ಳಬೇಕೆಂದು ಜುರುಕುಟಿಯಾಗೆ ಹೋಗಿದ್ದಾನೆ. ಸ್ವರ್ಣಲತ ಹೇಳಿದ ಹಾಗೆ ಅವಳ ಹಿಂದಿನ ಜನ್ಮದ ಗಂಡನಾದ ಚಿಂತಾಮಣಿ ಪಾಂಡೆಯನ್ನು ಬೇಟಿಮಾಡಿ ತನ್ನ ಮಗಳು ಸ್ವರ್ಣಲತ ಮಿಶ್ರಾಗೆ ಬಂದಿರುವ ಪೂರ್ವಜನ್ಮ ಜ್ಞಾಪಕಗಳನ್ನು ಆತನಿಗೆ ತಿಳಿಸಿದನು. ಆಗ ಚಿಂತಾಮಣಿ ಪಾಂಡೆ ತನ್ನ ಹೆಂಡತಿ ಬಿಯಾಪಾಠಕ್ 1939ರಲ್ಲಿಯೇ ಸತ್ತುಹೋಗಿದ್ದಾಳೆಂದು ಸ್ವರ್ಣಲತ ತಂದೆಗೆ ತಿಳಿಸುತ್ತಾನೆ. ಆದರೆ ಪಾಂಡೆ, 19 ಸಂವತ್ಸರಗಳ ಕೆಳಗೆ ಸತ್ತುಹೋದ ತನ್ನ ಹೆಂಡತಿ ಮರಳಿ ಸ್ವರ್ಣಲತಳಾಗಿ ಜನ್ಮಿಸಿದ್ದಾಳೆಂದು ನಂಬದೆಹೋಗಿದ್ದಾನೆ. ನಂತರ ಆ ವಿಷಯವು ಮಧ್ಯ ಪ್ರದೇಶ್ ಎಲ್ಲಾ ಕಡೆ ಹರಡಿಹೋಗಿದೆ. ಕೊನೆಗೆ ಪ್ರಖ್ಯಾತ ಭಾರತೀಯ ಸೈಕಾಲಜಿಸ್ಟ್ ಹೆಚ್.ಯನ್.ಬೆನರ್ಜಿ ವರೆಗು ಹೋಗಿದೆ. ಸ್ವರ್ಣಲತಳ ಪೂರ್ವಜನ್ಮ ವೃತ್ತಾಂತದಲ್ಲಿನ ನಿಜಾನಿಜಗಳನ್ನು ತಿಳಿದುಕೊಳ್ಳ ಬೇಕೆಂದುಕೊಂಡ ಹೆಚ್.ಎನ್.ಬೆನರ್ಜಿ ಮೊದಲು ಸ್ವರ್ಣಲತಳನ್ನು ಬೇಟಿಯಾಗಿ, ಆಕೆಯ ಹಿಂದಿನ ಜನ್ಮದಲ್ಲಿನ ಪೂರ್ವಜನ್ಮದ ಕುಟುಂಬದವರ ವಿವರಗಳನ್ನು, ಅವಳ ಹಿಂದಿನ ಜನ್ಮದಲ್ಲಿ ಜೀವಿಸಿದ ಮನೆ ಹೇಗಿರುತ್ತದೆ ಮೊದಲಾದ ವಿಷಯಗಳನ್ನು ತಿಳಿದುಕೊಂಡು, ನಂತರ ಜುರುಕುಟಿಯಾ ಗ್ರಾಮಕ್ಕೆ ಹೋಗಿ ಸ್ವರ್ಣಲತ ಹೇಳಿದ ವಿವರಗಳಿಂದ ಹೋಲಿಸಿ ನೋಡಿಕೊಂಡು, ಸ್ವರ್ಣಲತ ಹೇಳಿರುವವೆಲ್ಲ ನಿಜವೆಂದು, ಹಿಂದಿನ ಜನ್ಮದಲ್ಲಿನ ಬಿಯಾಪಾಠಕ್ ಈಗ

ಸ್ವರ್ಣಲತಳಾಗಿ ಹುಟ್ಟಿದ್ದಾಳೆಂದು ನಿರ್ಣಯಕ್ಕೆ ಬಂದಿದ್ದಾನೆ. ಸ್ವಲ್ಪಕಾಲ ಕಳೆದ ನಂತರ ಸ್ವರ್ಣಲತಗೆ ಹತ್ತು ಸಂವತ್ಸರಗಳ ವಯಸ್ಸು ಬಂದಿದೆ. ಆ ವಯಸ್ಸಿನಲ್ಲಿ ಹಿಂದಿನ ಜನ್ಮದ ಜ್ಞಾಪಕಗಳಿಂದ ಸ್ವರ್ಣಲತಗೆ ಮನಶ್ಶಾಂತಿ ಇಲ್ಲದೆ ಹೋಗಿದೆ. ಆ ಸಮಯದಲ್ಲಿಯೆ ಡಾಕ್ಟರ್ ಸ್ಟೀವೆನ್‌ಸನ್ ಇಂಡಿಯಾಗೆ ಬರಬೇಕಾಯಿತು.

ಸ್ಟೀವೆನ್‌ಸನ್ ತನ್ನ ಮಿತ್ರನಾದ ಬೆನರ್ಜಿ ಮೂಲಕ ಸ್ವರ್ಣಲತ ಪುನರ್ಜನ್ಮವನ್ನು ಕುರಿತು ತಿಳಿದುಕೊಂಡು ಎಷ್ಟೋ ಉತ್ತೇಜಕನಾಗಿದ್ದಾನೆ. ಆ ವಿಷಯದ ಮೇಲೆ ಆಸಕ್ತಿಹೊಂದಿದ ಸ್ಟೇವೆನ್, ಸ್ವರ್ಣಲತಳ ಗತ ಜನ್ಮದ ಗಂಡನಾದ ಚಿಂತಾಮಣಿ ಪಾಂಡೆಯನ್ನು ಕರೆದುಕೊಂಡು ಸ್ವರ್ಣಲತ ಇರುತ್ತಿದ್ದ ಛಾತ್ರಾಪೂರ್‌ಗೆ ಬಂದು ಸ್ವರ್ಣಲತಳನ್ನು ಬೇಟಿಯಾಗುತ್ತಾನೆ. ಸ್ವರ್ಣಲತ ತನ್ನ ಗತಜನ್ಮದ ಗಂಡನನ್ನು ನೋಡುತ್ತಲೆ ಗುರುತಿಸಿ ನಾಚಿಕೆಯಿಂದ ತಲೆಬಗ್ಗಿಸುತ್ತಾಳೆ. ಆಗ ಸ್ಟೀವೆನ್‌ಸನ್ ಪಾಂಡೆಯನ್ನು ಸ್ವರ್ಣಲತಗೆ ಪರಿಚಯ ಮಾಡಿಸುತ್ತಾನೆ. ಸ್ವರ್ಣಲತ ಎಷ್ಟೋ ಗುರುತುಗಳನ್ನು ಹೇಳಿದರೂ, ಪಾಂಡೇ ಅವಳನ್ನು ಗತದಲ್ಲಿನ ತನ್ನ ಹೆಂಡತಿಯಾಗಿ ಅಂಗೀಕರಿಸಲಿಲ್ಲ. ಅದರಿಂದ ಅವಳು ಆತನನ್ನು ಒಂದು ವಿಷಯ ಕೇಳುತ್ತಾಳೆ. ಅವಳು ಪಾಂಡೇಯನ್ನು "ನಾನು ನನ್ನ ಬೀರುವಿನಲ್ಲಿ ಬಟ್ಟೆಗಳ ಕೆಳಗೆ ಇಟ್ಟಿದ್ದ 1200 ರೂಪಾಯಿಗಳನ್ನು ಒಂದು ದಿನ ನೀವು ಕದಿಯಲಿಲ್ಲವೆ" ಎಂದು ಕೇಳಿದಳು. ಅದರಿಂದ ಪಾಂಡೇ ಮಂಕಾದನು. ಕೇವಲ ತಮ್ಮ ದಂಪತಿಗಳಿಗೆ ಇಬ್ಬರಿಗೆ ಮಾತ್ರ ತಿಳಿದ ರಹಸ್ಯ ಹತ್ತು ಸಂವತ್ಸರಗಳ ಹುಡುಗಿಗೆ ಹೇಗೆ ತಿಳಿದಿದೆಯೆಂದು ಆಶ್ಚರ್ಯಪಟ್ಟಿದ್ದಾನೆ. ಇದರಿಂದ ಚಿಕ್ಕ ಹುಡುಗಿಯಾಗಿದ್ದ ಸ್ವರ್ಣಲತ ಗತದಲ್ಲಿನ ತನ್ನ ಹೆಂಡತಿಯೆಂದು ಚಿಂತಾಮಣಿ ಪಾಂಡೇ ಒಪ್ಪಿಕೊಳ್ಳುತ್ತಾನೆ. ಆದ್ದರಿಂದ ಸ್ವರ್ಣಲತದ್ದು ಪುನರ್ಜನ್ಮ ಎಂದು ಡಾಕ್ಟರ್ ಸ್ಟೀವೆನ್‌ಸನ್‌ಗೆ ಸಾಬೀತಾಗಿದೆ. ಈ ವಿಧದಲ್ಲಿ ಸ್ವರ್ಣಲತ ಪುನರ್ಜನ್ಮ ವೃತ್ತಾಂತವು 1950 ರಿಂದ 1960ರ ಮಧ್ಯಕಾಲದಲ್ಲಿ ಪ್ರಪಂಚ ವ್ಯಾಪ್ತವಾಗಿ ಎಷ್ಟೋ ಸಂಚಲನೆಯನ್ನು ಸೃಷ್ಟಿಸಿದೆ.

ಮಧ್ಯಪ್ರದೇಶ್ ರಾಜ್ಯದಲ್ಲಿ ಹುಟ್ಟಿದ ಸ್ವರ್ಣಲತ ಸಾವಿಗು ಹುಟ್ಟುವುದಕ್ಕು ಮಧ್ಯ ಕಾಲ ಒಂಭತ್ತು ಸಂವತ್ಸರಗಳು ಕಳೆದಿದೆ. ಬಿಯಾಪಾಠಕ್ ಆಗಿ 1939ರಲ್ಲಿ ಸತ್ತುಹೋದ ಆಕೆ 1948ರಲ್ಲಿ ಸ್ವರ್ಣಲತಳಾಗಿ ಜನ್ಮಿಸಿದ್ದಾಳೆ. ಒಂದು ಕಡೆ ಇಲ್ಲದೆಹೋಗಿ ಮತ್ತೊಂದು ಕಡೆ ಬಂದಿರುವ ಅವಳು, ಒಂಭತ್ತು ಸಂವತ್ಸರಗಳ ಮಧ್ಯಕಾಲದಲ್ಲಿ ಎಲ್ಲಿದ್ದಾಳೆ? ಎಂದು ಪ್ರಶ್ನೆ ಬಾರದೆ ತಪ್ಪುವುದಿಲ್ಲ. ಬಿಯಾಪಾಠಕ್ ಸತ್ತುಹೋಗಿ ಸ್ವರ್ಣಲತಳಾಗಿ ಹುಟ್ಟುವುದಕ್ಕೆ ಹಿಡಿಸಿದ ಕಾಲವೆ ಎಲ್ಲರಿಗು ಸಾವು ಹುಟ್ಟುಗಳ ಮಧ್ಯೆ ಇದೆಯಾ ಎಂದು ನೋಡಿದರೆ ಹಾಗೂ ಸಹ ಇಲ್ಲ. ಹೊರಬಿದ್ದ ಪುನರ್ಜನ್ಮಗಳನ್ನು ಪರಿಶೀಲಿಸಿದರೆ ಒಬ್ಬರಿಗೆ ಎರಡು ಸಂವತ್ಸರಗಳು, ಮತ್ತೊಬ್ಬರಿಗೆ ಮೂರು ಸಂವತ್ಸರಗಳು ಅಲ್ಲದೆ, ಒಬ್ಬೊಬ್ಬರಿಗೆ ಒಂದೊಂದು ಕಾಲಾವಧಿ ಇರುವುದನ್ನು ನಾವು ಗಮನಿಸಬಹುದು. ಉದಾಹರಣೆಗೆ ಮತ್ತೊಂದು ಪುನರ್ಜನ್ಮ ಸಮಾಚಾರವನ್ನು ವಿವರಿಸಿಕೊಂಡು ನೋಡೋಣ.

ಮೊಟ್ಟಮೊದಲು ಭಾರತೀಯ ಅಂತರಿಕ್ಷ ಯಾತ್ರಿಕಳಾದ ಕಲ್ಪನಾ ಚಾವ್ಲಾ ಹೆಸರು ಕೇಳದವರಿಲ್ಲ. ಭಾರತೀಯ ಮಹಿಳಾ ಸಾಹಸಕ್ಕೆ, ಮೇಧಸ್ಸಿಗೂ ಚಿಹ್ನೆಯಾಗಿ ನಿಂತುಹೋಗಿರುವ ಪಂಜಾಬ್ ರಾಜ್ಯಕ್ಕೆ ಸೇರಿದ ಕಲ್ಪನಾಚಾವ್ಲಾ, ಅಮೆರಿಕಾ ದೇಶಕ್ಕೆ ಸೇರಿದ ಅಂತರಿಕ್ಷ ಪರಿಶೋಧನಾ ಸಂಸ್ಥೆ NASA (ನಾಸಾ)ದಲ್ಲಿ ಕೆಲಸ ಮಾಡುತ್ತಿದ್ದಳು. ಅಂತರಿಕ್ಷದೊಳಗೆ ಪ್ರಯೋಗಿಸಿದ ಕೊಲಂಬಿಯಾ ಸ್ಪೇಸ್‌ಷಿಪ್‌ನಲ್ಲಿ ಇತರ ಪಾಶ್ಚಾತ್ಯ ಅಂತರಿಕ್ಷ ಯಾತ್ರಿಕರೊಂದಿಗೆ ಅಂತರಿಕ್ಷ ಯಾತ್ರೆಯಲ್ಲಿ ಪರಿಶೋಧಕಿಯಾಗಿ ಪಾಲ್ಗೊಂಡು ಅಂತರಿಕ್ಷದೊಳಗೆ ಪ್ರಯಾಣಿಸಿದ್ದಳು. ಆಕಾಶದಲ್ಲಿಯೆ ಸ್ವಲ್ಪಕಾಲ ಕಳೆದು ಪರಿಶೋಧನೆ ಸಾಗಿಸಿದ ನಂತರ ಕೊಲಂಬಿಯಾ ಸ್ಪೇಸ್‌ಷಿಪ್ ಭೂಮಿಗೆ ಹಿಂತಿರುಗಿ ಪ್ರಯಾಣ ಪ್ರಾರಂಭಿಸಿದೆ. 2003ನೇ ಸಂವತ್ಸರ ಫೆಬ್ರವರಿ 1ನೇ ತಾರೀಖಿನಂದು ಇನ್ನು ಹದಿನಾರು (16) ನಿಮಿಷಗಳಲ್ಲಿ ಭೂಮಿಮೇಲೆ ಇಳಿಯುತ್ತಿದ್ದ ಕೊಲಂಬಿಯಾ ಸ್ಪೇಸ್‌ಷಿಪ್ ದುರದೃಷ್ಟವಶಾತ್ತು ಊಹಿಸದ ಪರಿಣಾಮಗಳಿಂದ ಆಕಾಶದಲ್ಲಿಯೆ ಭೂಮಿ ವಾತಾವರಣದೊಳಗೆ ಪ್ರವೇಶಿಸುತ್ತಲೆ ಸಿಡಿದುಹೋಗಿದೆ. ಆದರೊಂದಿಗೆ

ಅದರಲ್ಲಿ ಪ್ರಯಾಣಿಸುತ್ತಿದ್ದ ಅಂತರಿಕ್ಷ ಯಾತ್ರಿಕರೆಲ್ಲರೂ ಚಿಕ್ಕಚಿಕ್ಕ ತುಂಡುಗಳಾಗಿ ಸತ್ತುಹೋಗಿದ್ದಾರೆ. ಭಾರತೀಯ ವ್ಯೋಮಗಾಮಿ ಕಲ್ಪನಾಚಾವ್ಲಾ ಸಹ ಆ ಘೋರ ಅಪಘಾತದಲ್ಲಿ ಪ್ರಾಣ ಬಿಡುವುದು ನಡೆದಿದೆ. ಆದರೆ ಆಕೆ ತಿರುಗಿ ಸ್ವಲ್ಪ ದಿನಗಳಿಗೆ ತಿರುಗಿ ಭೂಮಿಮೇಲೆ ಹುಟ್ಟಿದ್ದಾಳೆ.

ಕಲ್ಪನಾಚಾವ್ಲಾ ತಿರುಗಿ ಹುಟ್ಟಿದ ಸಮಾಚಾರವನ್ನು (ಎಸ್.ಬಿ.ಯನ್ 7) ಛಾನಲ್ ಮತ್ತು ಇಂಡಿಯಾಟುಡೆ ಪತ್ರಿಕೆ, ಕಲ್ಪನಾಚಾವ್ಲಾ ಮತ್ತೆ ಜನ್ಮಿಸಿದ ಕಥನವನ್ನು ಪ್ರಸಾರ ಮಾಡಿ ಪ್ರಪಂಚಕ್ಕೆ ಒದಗಿಸಲಾಗಿದೆ. ಆ ವಿವರಗಳನ್ನು ನೋಡಿದರೆ, ಉತ್ತರ ಭಾರತದೇಶದಲ್ಲಿ ಉತ್ತರ್ ಪ್ರದೇಶ್ ರಾಜ್ಯದಲ್ಲಿರುವ ಬುಲ್ಲಂದ್ ಷಹರ್ ಎನ್ನುವ ಗ್ರಾಮದಲ್ಲಿ ರಾಜಕುಮಾರ್ ಎನ್ನುವ ಸಾಧಾರಣ ವ್ಯವಸಾಯ ಕೂಲಿಯಾಗಿ ಕೆಲಸ ಮಾಡುತ್ತಿರುವ ವ್ಯಕ್ತಿ ಕುಟುಂಬದಲ್ಲಿ ಆತನಿಗೆ ಮಗಳಾಗಿ ಜನ್ಮಿಸಿದ್ದಾಳೆ. 2003ನೇ ಸಂವತ್ಸರ ಮಾರ್ಚಿ 23ನೇ ತಾರೀಖಿನಂದು ಉಪಾಸನ ಎನ್ನುವ ಹೆಸರಿಂದ ಆ ಕುಟುಂಬದಲ್ಲಿ ಕಲ್ಪನಾಚಾವ್ಲಾ ಜನ್ಮಿಸಿದ್ದಾಳೆ. ಉಪಾಸನ (ಕಲ್ಪನಾಚಾವ್ಲಾ)ಗೆ ನಾಲ್ಕು ಸಂವತ್ಸರಗಳ ವಯಸ್ಸಿನಲ್ಲಿ ಮಾತುಗಳು ಬಂದಿವೆ. ಮಾತನಾಡುವುದನ್ನು ಪ್ರಾರಂಭಿಸಿದ ಉಪಾಸನ, ತಾನು ಗತ ಜನ್ಮದಲ್ಲಿ ಕಲ್ಪನಾಚಾವ್ಲಾ ಎನ್ನುವ ಹೆಸರಿರುವ ಅಂತರಿಕ್ಷ ಪರಿಶೋಧಕಳೆಂದು, ತನ್ನ ತಂದೆ ಹೆಸರು ಬನಾರ್ಸಿದಾಸ್ ಎಂದು, ನಾಲ್ಕು ಸಂವತ್ಸರಗಳ ಕೆಳಗೆ ತಾನು ಜೊತೆಯಲ್ಲಿರುವ ಅಂತರಿಕ್ಷ ಪರಿಶೋಧಕರೊಂದಿಗೆ ಸೇರಿ ಒಂದು ವಿಮಾನದಲ್ಲಿ ಆಕಾಶದಿಂದ ಇಳಿಯುತ್ತಿರುವಾಗ, ತಮ್ಮ ವಿಮಾನಕ್ಕೆ ಅಪಘಾತ ನಡೆದು ತಾವೆಲ್ಲರು ಸತ್ತುಹೋಗಿದ್ದೇವೆಂದು ಹೇಳಿದ್ದಾಳೆ.

ಗತಜನ್ಮ ವಿವರಗಳನ್ನು ಮಣಿಪೋಣಿಸಿದ ಹಾಗೆ ಹೇಳುತ್ತಿರುವ ಉಪಾಸನ (ಕಲ್ಪನಾಚಾವ್ಲಾ) ಹೆಸರು ಉತ್ತರ ಪ್ರದೇಶ್ ರಾಷ್ಟ್ರವೆಲ್ಲಾ ಕ್ರಮವಾಗಿ ತಿಳಿದುಹೋಗಿದೆ. ಪ್ರಸ್ತುತ ಉತ್ತರಪ್ರದೇಶದಲ್ಲಿ ಎತ್ವಾ ಜಿಲ್ಲೆಯಲ್ಲಿ "ಪಠಾ" ಎಂಬ ಗ್ರಾಮದಲ್ಲಿ ಕೂಲಿಕೆಲಸ ಮಾಡಿಕೊಳ್ಳುತ್ತಿರುವ ತಂದೆ ರಾಜ್‌ಕುಮಾರ್‌ನೊಂದಿಗೆ ಜೀವಿಸುತ್ತಿರುವ ಉಪಾಸನ ತನ್ನನ್ನು ಇಂಟರ್ವ್ಯೂ ಮಾಡುವುದಕ್ಕೆ

ಬಂದಿರುವ ಪ್ರಪಂಚಮಟ್ಟದ ಮೀಡಿಯಾ ಪ್ರತಿನಿಧಿಗಳೊಂದಿಗೆ ಮಾತನಾಡುತ್ತಾ ನಾವು ಭೂಮಿಮೇಲೆ ಹಿಂತಿರುಗಿ ಬರುತ್ತಿದ್ದ ಅಂತರಿಕ್ಷನೌಕೆಗೆ ಆಕಾಶದಲ್ಲಿ ಸಂಚರಿಸುತ್ತಿದ್ದ ಒಂದು ದೊಡ್ಡ ಮಂಜುಗೋಳವನ್ನು ಗುದ್ದಿಕೊಂಡಿತೆಂದು, ಆದ್ದರಿಂದ ತಮ್ಮ ಅಂತರಿಕ್ಷನೌಕೆ ಸಿಡಿದುಹೋಗಿ ಅದರಲ್ಲಿನ ನಾವೆಲ್ಲರೂ ಸತ್ತು ಹೋಗಿದ್ದೇವೆಂದು ಹೇಳಿದಳು. 2003ನೇ ಸಂವತ್ಸರ ಫೆಬ್ರವರಿ 1ನೇ ತಾರೀಖಿನಂದು ನಾಸಾಕೇಂದ್ರದವರು ಅಂತರಿಕ್ಷನೌಕೆಗೆ ಹೊರಗೆ ಪಕ್ಕದಲ್ಲಿ ಸುತ್ತು ಆವರಿಸಿದ ಪ್ಲೇಟು ಬಿಚ್ಚಿಕೊಂಡು ಹೋಗಿರುವದರಿಂದ ಆ ನೌಕೆ ಭೂಮಿ ವಾತಾವರಣದೊಳಗೆ ಬರುತ್ತಲೆ ವಾತಾವರಣ ಒತ್ತಡದ ಬಿಸಿಗೆ ಸಿಡಿದು ಹೋಗಿದೆಯೆಂದು ಹೇಳಿದ್ದಾರೆ. ನಾಸಾದವರು ಅಂದುಕೊಂಡಹಾಗೆ ಅಲ್ಲಿ ನಡೆದಿಲ್ಲವೆಂದು, ಆಕಾಶದಲ್ಲಿ ಭೂಮಿಗೆ 70 ಕಿಲೋಮೀಟರುಗಳ ದೂರದಲ್ಲಿಯೆ ಮಂಜುಗೋಳಕ್ಕೆ ಅಂತರಿಕ್ಷನೌಕೆ ಗುದ್ದಿಕೊಂಡಿರುವುದರಿಂದ ಅಪಘಾತ ನಡೆದಿದೆಯೆಂದು ಪ್ರತ್ಯಕ್ಷ ಸಾಕ್ಷಿಯಾದ ಕಲ್ಪನಾಚಾವ್ಲಾ ಹೇಳಿರುವುದರಿಂದ ತಿಳಿದುಹೋಗಿದೆ.

ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ! ನಾವು ಮೊದಲು ಹೇಳಿಕೊಂಡಿರುವ ಸ್ವರ್ಣಲತಾ ಮಿಶ್ರಾ ಪುನರ್ಜನ್ಮ ಸಮಾಚಾರದಲ್ಲಿ ಸ್ವರ್ಣಲತ ಗತಜನ್ಮದಲ್ಲಿ 1939ನೆ ಸಂ॥ಲ್ಲಿ ಸತ್ತುಹೋಗಿ ನಂತರ 1948 ಸಂವತ್ಸರದಲ್ಲಿ ಹುಟ್ಟಿದಳು. ಇದರಿಂದ ಸ್ವರ್ಣಲತ ತಿರುಗಿ ಹುಟ್ಟುವುದಕ್ಕೆ ಒಂಭತ್ತು ವರ್ಷಗಳ ಅವಧಿ ಆದಾಗ, ಕಲ್ಪನಾಚಾವ್ಲಾ, ಉಪಾಸನಳಾಗಿ ಹುಟ್ಟುವುದಕ್ಕೆ ಕೇವಲ ಒಂದು ತಿಂಗಳು 22 ದಿನಗಳು ಮಾತ್ರವೆ ಹಿಡಿದಿದೆ. ಈ ವಿಧವಾಗಿ ಇಲ್ಲಿಯವರೆಗು ನಾವು ಹೇಳಿಕೊಂಡ ಪುನರ್ಜನ್ಮ ಸಮಾಚಾರಗಳಲ್ಲಿ ಅವರು ಸತ್ತುಹೋದ ಕಾಲಕ್ಕು ತಿರುಗಿ ಹುಟ್ಟಿದ ಕಾಲಕ್ಕು ಮಧ್ಯದಲ್ಲಿ ಕೆಲವು ತಿಂಗಳುಗಳು, ಕೆಲವು ವರ್ಷಗಳ ಸಮಯ ಹಿಡಿದಿದೆ. 29 ವರ್ಷಗಳ ವಯಸ್ಸಿರುವ ಅಮೆರಿಕನ್ ನಾವಿಫೈಟರ್ ಪೈಲೆಟ್ ಜೇಮ್ಸ್‌ಹಾಸ್ಟನ್ ಎರಡನೇ ಪ್ರಪಂಚಯುದ್ಧದಲ್ಲಿ ಜಪಾನ್‌ನೊಂದಿಗೆ ಹೋರಾಡುತ್ತಿರುವಾಗ, 1945 ಮಾರ್ಚಿ 3ನೇ ತಾರೀಖಿನಂದು

ಪೆಸಿಫಿಕ್ ಸಮುದ್ರದ ಮೇಲೆ ಹಾರುತ್ತಿರುವ ಆತನ ವಿಮಾನವನ್ನು ಜಪಾನ್ ಅರ್ಸೆರಿ ವಿಭಾಗಕ್ಕೆ ಸೇರಿದವರು ಕೆಡವಿಹಾಕಿದರು. ಅದರಲ್ಲಿ ಜೇಮ್ಸ್‌ಹಾಸ್ಟನ್ ತಾನು ನಡೆಸುತ್ತಿದ್ದ ಯುದ್ಧವಿಮಾನದೊಂದಿಗೆ ಸಹ ತುಂಡು ತುಂಡುಗಳಾಗಿ ಪೆಸಿಫಿಕ್ ಸಮುದ್ರದಲ್ಲಿ ಸೇರಿಹೋದನು. ನಂತರ 1998ರಲ್ಲಿ ಜೇಮ್ಸ್‌ಹಾಸ್ಟನ್ ತಿರುಗಿ ಜೇಮ್ಸ್‌ಲೆನಿಂಜರ್ ಆಗಿ ಜನ್ಮಿಸಿದ್ದಾನೆ. ಹಾಸ್ಟನ್ ಸತ್ತುಹೋಗಿ ಲೆನಿಂಜರ್ ಹುಟ್ಟುವುದಕ್ಕೆ ಮಧ್ಯೆ ಕಳೆದ ಕಾಲ ಏಕವಾಗಿ 53 ವರ್ಷಗಳು ಹಿಡಿದಿದೆ. ಕಲ್ಪನಾ ಚಾವ್ಲಾ ಕೇವಲ 52 ದಿನಗಳಲ್ಲಿ ತಿರುಗಿ ಉಪಾಸನಳಾಗಿ ಹುಟ್ಟಿದರೆ, ಸ್ವರ್ಣಲತ 9 ವರ್ಷಗಳಿಗೆ ಹುಟ್ಟಿದರೆ, ಲೆನಿಂಜರ್‌ಗೆ 53 ವರ್ಷಗಳು ಹಿಡಿದಿದೆ. ಲೆಬನಾನ್ ದೇಶದಲ್ಲಿ ಹಾಸನ್ ಮರಣಿಸಿದ ನಂತರ 10 ದಿನಗಳಿಗೆ ಸುಜನ್ನೆ ಗಾನೆಮ್ ಆಗಿ ಹುಟ್ಟಿದಳೆಂದು ಮೊದಲ ಸಂಘಟನೆಯಲ್ಲಿ ಹೇಳಿಕೊಂಡಿದ್ದೇವೆ. ಎರಡನೇ ಜನ್ಮಕ್ಕೆ ಬರುವುದಕ್ಕೆ ಮೊದಲು ಮಧ್ಯಕಾಲದಲ್ಲಿ ಇವರು ಏನಾಗಿದ್ದಾರೆ? ಎಲ್ಲಿದ್ದಾರೆ? ಎಂದು ಯೋಚಿಸಿದರೆ ಅದಕ್ಕೆ ನಮ್ಮಿಂದ ಬರುವ ಸಮಾಧಾನ ಏನೆಂದರೆ!

ಮಾನವ ಶರೀರ ಎರಡು ಭಾಗಗಳಾಗಿ ಇದೆಯೆಂದು, ಆ ಎರಡು ಭಾಗಗಳು ಸ್ಥೂಲಭಾಗ, ಸೂಕ್ಷ್ಮ ಭಾಗಗಳಾಗಿ ಇವೆಯೆಂದು ಮೊದಲೆ ಹೇಳಿಕೊಂಡಿದ್ದೇವೆ. ಇದಕ್ಕೆ ಸಂಬಂಧಿಸಿದ ವಿಷಯ **"ಮರಣ ರಹಸ್ಯ" "ಜನನ ಮರಣ ಸಿದ್ಧಾಂತ"** ಎನ್ನುವ ಗ್ರಂಥಗಳಲ್ಲಿಯು ಸಹ ಬರೆದಿದ್ದೇವೆ. ಅವುಗಳಲ್ಲಿನ ಸಮಾಚಾರದ ಪ್ರಕಾರ ಒಬ್ಬ ಮನುಷ್ಯ ಸ್ಥೂಲವಾಗಿ ಸತ್ತುಹೋಗಿದ್ದರೆ ಆತನು ಸೂಕ್ಷ್ಮವಾಗಿ ಬದುಕಿ ಇರುವನು. ಆತನು ಪೂರ್ತಿಯಾಗಿ ಸತ್ತುಹೋಗಿಲ್ಲವೆಂದು ಆತನು ಪೂರ್ತಿಯಾಗಿ ಸಾಯುವುದಕ್ಕೆ ಮತ್ತೆ ಸ್ವಲ್ಪಕಾಲ ಹಿಡಿಯುವುದೆಂದು ತಿಳಿದಿದ್ದೇವೆ. ಅಷ್ಟೇ ಅಲ್ಲದೆ ಒಬ್ಬ ಮನುಷ್ಯ ಸತ್ತುಹೋದರೂ, ಅದು ಸ್ಥೂಲಮರಣವಾದರೂ, ಅದು ತಾತ್ಕಾಲಿಕ ಮರಣವಾಗಿರುವುದರಿಂದ ಆತನು ತಿರುಗಿ ಸ್ಥೂಲವಾಗಿ ಅದೇ ಶರೀರದೊಂದಿಗೆ ಬದುಕುವ ಅವಕಾಶವಿದೆ. ಹಾಗೆ ಎಷ್ಟೋಜನ ಸತ್ತುಹೋದ ನಂತರ ಮೂರು ನಾಲ್ಕು ದಿನಗಳಿಗೆ ಎಚ್ಚರವಾದ

ವರಿದ್ದಾರೆ. ಒಬ್ಬ ಮನುಷ್ಯ ಸೂಕ್ಷ್ಮ ಶರೀರವನ್ನು, ಸ್ಥೂಲಶರೀರವನ್ನು ಎರಡನ್ನು ಬಿಟ್ಟು ಹೋದಾಗ ಅದು ಪೂರ್ತಿ ಮರಣದ ಕೆಳಕ್ಕೆ ಜಮೂಯಿಸಬಹುದು. ಪೂರ್ತಿ ಮರಣ ಹೊಂದಿದವನು ಒಂದು ಕ್ಷಣ (ಒಂದು ಸೆಕೆಂಡು) ಸಹ ತಡ ಮಾಡದೆ ಮತ್ತೆ ಹಿಂದೆಯೆ ಹುಟ್ಟುವನು. ಈ ವಿಧಾನ ಬಹುಶ ಜನರಿಗೆ ತಿಳಿಯದು. ಮರಣಗಳು ಮೂರು ವಿಧಗಳೆಂದು, ಅದರಲ್ಲಿ ಒಂದು ಅಕಾಲಮರಣ, ಎರಡನೆಯದು ತಾತ್ಕಾಲಿಕ ಮರಣ, ಮೂರನೆಯದು ಪೂರ್ತಿ ಮರಣವಾಗುವುದು. ಸ್ಥೂಲ ಶರೀರ ಸತ್ತುಹೋಗಿ ಸೂಕ್ಷ್ಮಶರೀರ ಉಳಿದಿದ್ದರೆ ಅದು ಅಕಾಲಮರಣವಾಗುವುದು. ಸ್ಥೂಲ, ಸೂಕ್ಷ್ಮಶರೀರಗಳು ಎರಡೂ ಹೋದಾಗ ಅದು ಮರಣವಾಗುತ್ತದೆ. ಜೀವಾತ್ಮ ಶರೀರದಲ್ಲಿರುವಾಗಲೆ ಶರೀರದಲ್ಲಿನ ಆತ್ಮ ತನ್ನ ಕೆಲಸವನ್ನು ನಿಲ್ಲಿಸಿದರೆ ಉಸಿರು ನಿಂತುಹೋಗುವುದು. ಆದರೆ ಅದು ಸಹ ಮರಣವಲ್ಲ. ಆತ್ಮ ಅಂದುಕೊಂಡರೆ ಯಾವಾಗಾದರೂ ಆತನು ಎದ್ದು ನಡೆಯಬಲ್ಲನು.

ಸ್ವರ್ಣಲತಳಾಗಲಿ, ಜೇಮ್ಸ್‌ಲೆನಿಂಜರ್ ಆಗಲಿ, ಕಲ್ಪನಾಚಾವ್ಲಾ ಆಗಲಿ ಹಾಸನ್ ಆಗಲಿ ಮೊದಲು ಸತ್ತುಹೋದಾಗ ಅವರು ಪೂರ್ತಿ ಮರಣವನ್ನು ಹೊಂದಲಿಲ್ಲ. ಅವರು ಸತ್ತುಹೋದಾಗ ಸ್ಥೂಲ ಶರೀರಹೋಗಿ, ಸೂಕ್ಷ್ಮಶರೀರ ಉಳಿದುಹೋಗಿರುವುದರಿಂದ ಅದು ಅಕಾಲಮೃತ್ಯುವಾಗಿದೆ. ಆದ್ದರಿಂದ ಅವರಿಗೆ ಪೂರ್ತಿಯಾಗಿ ಸಾವು ಬರುವುದಕ್ಕೆ ಅವರವರ ಕರ್ಮದ ಪ್ರಕಾರ ಕೆಲವು ದಿನಗಳಾಗಲಿ, ಕೆಲವು ತಿಂಗಳುಗಳಾಗಲಿ, ಕೆಲವು ವರ್ಷಗಳಾಗಲಿ ಹಿಡಿಯ ಬಹುದು. ಅದೇ ವಿಧವಾಗಿಯೆ ಸ್ವರ್ಣಲತ ಸತ್ತುಹೋದ ನಂತರ 9 ವರ್ಷಗಳಿಗೆ, ಲೆನಿಂಜರ್‌ಗೆ 53 ವರ್ಷಗಳಿಗೆ, ಕಲ್ಪನಾಚಾವ್ಲಾಗೆ 52 ದಿನಗಳಿಗೆ, ಹಾಸನ್‌ಗೆ 10 ದಿನಗಳಿಗೆ ಪೂರ್ತಿ ಮರಣಬಂದು, ಆಗ ಮತ್ತೆ ಹಿಂದೆಯೆ ಹುಟ್ಟಿದ್ದಾರೆ. ಅಲ್ಲಿಯವರೆಗು ಅವರು ತಮ್ಮ ಮೊದಲ ಜನ್ಮದಲ್ಲಿ ಇದ್ದಹಾಗೆ ಲೆಕ್ಕಿಸಲಾಗುತ್ತದೆ.

ನಾವು ಆಧ್ಯಾತ್ಮಿಕರೆನ್ನುವವರು ಕೆಲವರು, ಮನುಷ್ಯ ಸತ್ತುಹೋದಕೂಡಲೇ ಹುಟ್ಟುವುದಿಲ್ಲವೆಂದು, ಆತನು ಮಾಡಿಕೊಂಡ ಪಾಪವನ್ನು ಅನುಭವಿಸುವುದಕ್ಕೆ

ನರಕಕ್ಕೆ, ಹಾಗೆ ಪುಣ್ಯವನ್ನು ಅನುಭವಿಸುವುದಕ್ಕೆ ಸ್ವರ್ಗಕ್ಕೆ ಹೋಗಿ ಅಲ್ಲಿ ಅನುಭವಿಸಿದ ನಂತರ ಬ್ರಹ್ಮದೇವನ ಹತ್ತಿರಕ್ಕೆ ಹೋಗಿ, ಆತನ ಹತ್ತಿರ ಹೊಸ ಬರಹ ಬರೆಸಿಕೊಂಡು ಹುಟ್ಟುತ್ತಿದ್ದಾರೆಂದು, ಆದ್ದರಿಂದ ಸತ್ತುಹೋದ ಹಿಂದೆಯೆ ಹುಟ್ಟುವುದು ಆಲಸ್ಯವಾಗಿ ಹುಟ್ಟುವುದು ನಡೆಯುತ್ತದೆಂದು ಹೇಳುತ್ತಿದ್ದಾರೆ. ಇವರು ಹೇಳಿರುವುದಕ್ಕೂ ಅವರು ಆಲಸ್ಯವಾಗಿ ಹುಟ್ಟುವುದಕ್ಕೂ ಕೇಳುವುದಕ್ಕೆ ಸರಿಹೋದರೂ ಅದು ಸತ್ಯವಲ್ಲ, ಶಾಸ್ತ್ರಬದ್ಧವೂ ಅಲ್ಲ. ಸ್ವರ್ಗ ನರಕಗಳು ಮನುಷ್ಯನ ಜೀವನದಲ್ಲಿಯೆ ಇವೆ, ಆದರೆ ಮನುಷ್ಯ ಸತ್ತುಹೋದ ನಂತರ ಇಲ್ಲ. ಬಹಳ ಜನ ಆಧ್ಯಾತ್ಮಿಕರೆನ್ನುವವರೆಲ್ಲರೂ ತಪ್ಪಾಗಿ ತಿಳಿದಿರುವುದು ಇಲ್ಲಿಯೆ. ಒಂದು ಇಂದೂ (ಹಿಂದೂ) ಮತದಲ್ಲಿಯೆ ಅಲ್ಲದೆ, ಉಳಿದ ಮತಗಳಲ್ಲಿಯೂ ಸಹ ಸ್ವರ್ಗ ನರಕಗಳ ಹತ್ತಿರ ಎಲ್ಲರೂ ತಪ್ಪುದಾರಿ ಹಿಡಿದಿದ್ದಾರೆ. ಇಲ್ಲಿ ಎಲ್ಲರೂ ಸ್ವಲ್ಪ ಆಲೋಚಿಸಬೇಕಾದ ಅವಶ್ಯಕತೆ ಇದೆ. ಹೋದ ಜನ್ಮದಲ್ಲಿನ ವಿಷಯಗಳನ್ನು ಹೇಳುವ ಮನುಷ್ಯರಿದ್ದಾರಾಗಲಿ, ಸತ್ತುಹೋದ ನಂತರ ಸ್ವರ್ಗಕ್ಕಾಗಲಿ, ನರಕಕ್ಕಾಗಲಿ ಹೋಗಿ ಬಂದಿದ್ದೇವೆಂದು ಹೇಳುವವರು ಯಾರೂ ಇಲ್ಲ. ಕಲ್ಪನಾಚಾವ್ಲಾ ಆಗಲಿ, ಸ್ವರ್ಣಲತ ಆಗಲಿ, ಜೆಮ್ಸ್‌ಲೆನೆಂಜರ್ ಆಗಲಿ ಮರಣಿಸಿದ ನಂತರ ಒಬ್ಬರಿಗೊಬ್ಬರು ಎಷ್ಟೋ ವ್ಯತ್ಯಾಸದಲ್ಲಿ ಹುಟ್ಟಿದ್ದಾರೆ. ಆದರೂ ಅವರಲ್ಲಿ 53 ವರ್ಷಗಳಿಗೆ ಹುಟ್ಟಿದ ಲೆನಿಂಜರ್ ಅಗಲಿ, 9 ವರ್ಷಗಳಿಗೆ ಹುಟ್ಟಿದ ಸ್ವರ್ಣಲತ ಆಗಲಿ, ಕೇವಲ ಒಂದು ತಿಂಗಳು 22 ದಿನಗಳಿಗೆ ಹುಟ್ಟಿದ ಕಲ್ಪನಾಚಾವ್ಲಾ ಆಗಲಿ, 10 ದಿನಗಳಿಗೆ ಹುಟ್ಟಿದ ಹಾಸನ್ ಆಗಲಿ ನಾವು ಸ್ವರ್ಗಕ್ಕೆ ಹೋಗಿದ್ದ ಹಾಗಾಗಲಿ, ನರಕಕ್ಕೆ ಹೋಗಿದ್ದ ಹಾಗಾಗಲಿ ಎಲ್ಲಿಯೂ ಹೇಳಲಿಲ್ಲ. ಪ್ರತಿ ವಿಷಯವನ್ನು ಕುರುಡರಾಗಿ ನಂಬದೆ ಸ್ವಲ್ಪ ಯೋಚಿಸಿದರೆ ಸತ್ಯ ತಿಳಿದು ಹೋಗುತ್ತದೆ. ಮರಣದ ನಂತರ ಸ್ವರ್ಗನರಕಗಳು ಅಸತ್ಯವೆಂದು ಹೇಳುವುದಕ್ಕೆ ಆಧಾರವಿದೆ. ಹಾಗೆ ಸ್ವರ್ಗ ನರಕಗಳನ್ನು ಮನುಷ್ಯ ಜೀವನದಲ್ಲಿಯೆ ಅನುಭವಿಸುತ್ತಾನೆನ್ನುವುದಕ್ಕು ಸಹ ಆಧಾರವಿದೆ.

ನನಗೆ ಹತ್ತು ಅಥವಾ ಹನ್ನೊಂದು ವರ್ಷಗಳ ಚಿಕ್ಕ ವಯಸ್ಸಿನಲ್ಲಿನ ಒಂದು ಸಂಘಟನೆ ಚೆನ್ನಾಗಿ ಜ್ಞಾಪಕವಿದೆ. ಅದೇನೆಂದರೆ! ಒಬ್ಬ ವ್ಯಕ್ತಿ

ಮಾನಸಿಕವಾಗಿ ಎಲ್ಲ ವಿಧಗಳಲ್ಲಿ ಚೆನ್ನಾಗಿರುವಾಗ ಅಮಾವಾಸ್ಯೆಗೆ, ಹುಣ್ಣಿಮೆಗೆ ಆತನಿಗೆ ಮತಿಸ್ಥಿಮಿತವಾಗಿ ಇರುತ್ತಿರಲಿಲ್ಲ. ಆ ದಿನ ಮನೆಯಲ್ಲಿ ಇಲ್ಲದೆ ಹೋಗಿ, ರಸ್ತೆಯಲ್ಲಿ ಸುಮ್ಮನೆ ಕೇಕೆ ಹಾಕಿ ತಿರುಗುತ್ತಿದ್ದನು. ಆತನ ಬಂಧುಗಳು ಆತನನ್ನು ಮನೆಯಲ್ಲಿ ಬಲವಂತವಾಗಿ ಇರಿಸಿದರೂ, ಆ ಎರಡು ದಿನಗಳಲ್ಲಿ ಯಾಮಾತ್ರವು ಮನೆಯಲ್ಲಿ ಇರುತ್ತಿರಲಿಲ್ಲ. ಆತನು ಹಾಗೆ ಕಿರುಚುತ್ತಾ ತಿರುಗುವಾಗ ಆತನ ಬಾಯಿಯಿಂದ ಹೆಚ್ಚಿನ ಜೊಲ್ಲು ಸೋರುತ್ತಿತ್ತು. ಆತನು ಒಂದು ದಿನ ಅನಾರೋಗ್ಯದಿಂದ ಅಮಾವಾಸ್ಯೆ ದಿನವೆ ರಸ್ತೆಯಲ್ಲಿ ಸತ್ತು ಹೋಗುತ್ತಾನೆ. ಆತನು ಸತ್ತುಹೋದ ಸಮಯಕ್ಕೆ ಆತನಿರುವ ಬೀದಿಯಲ್ಲಿಯೆ ಬೇರೆಯವರ ಮನೆಯಲ್ಲಿ ಒಬ್ಬ ಹೆಣ್ಣು ಮಗು ಹುಟ್ಟಿತು. ಅ ಹೆಣ್ಣು ಶಿಶುವಿಗೆ ಅರ್ದ ಗಂಟೆಯವರೆಗು ಪ್ರಾಣ ಬರಲಿಲ್ಲ. ಆ ಮಗುವಿನ ತಾಯಿ ಗರ್ಭದಲ್ಲಿಯೆ ಸತ್ತುಹೋಗಿದೆಯೆಂದು ಅವರು ಅಂದುಕೊಂಡು ಆ ಶಿಶುವನ್ನು ಹೂಣಿಸಲು ಮನೆಯ ಹೊರಗೆ ತಂದಿದ್ದಾರೆ. ಅದೇ ಸಮಯಕ್ಕೆ ಮತಿಸ್ಥಿಮಿತವಿಲ್ಲದ ವ್ಯಕ್ತಿ ಸತ್ತುಹೋಗುವುದು ನಡೆದಿದೆ. ಆತನು ಸತ್ತುಹೋದ ಕೂಡಲೇ ಅಲ್ಲಿಯವರೆಗು ಕದಲಿಕೆ ಇಲ್ಲದ ಶಿಶುವಿಗೆ ಪ್ರಾಣ ಬಂದು ಅಳುವುದಕ್ಕೆ ಮೊದಲಿಟ್ಟಿದೆ. ಆಗ ಶಿಶು ಬದುಕಿದೆಯೆಂದು ಅವರು ಮನೆಯೊಳಗೆ ತಂದುಕೊಂಡಿದ್ದಾರೆ. ಇದೆಲ್ಲಾ ನಾನು ಪ್ರತ್ಯಕ್ಷವಾಗಿ ನೋಡಿದ ವಿಷಯ. ನಂತರ ಆ ಶಿಶುವಿಗೆ ನಾಲ್ಕು ವರ್ಷಗಳ ವಯಸ್ಸಿನಲ್ಲಿ ಮಾತುಗಳು ಬಂದನಂತರ, ನಾನು ಗತಜನ್ಮದಲ್ಲಿ ಇದೇ ಬೀದಿಯಲ್ಲಿ ಇರುತ್ತಿದ್ದೆನೆಂದು, ತಾನು ಆಗ ಮತಿಸ್ಥಿಮಿತವಿಲ್ಲದ ಮನುಷ್ಯನೆಂದು, ತಾನು ಬದುಕಿದ್ದಾಗ ಈ ಮನೆಯ ಹತ್ತಿರಕ್ಕು ಸಹ ಬರುತ್ತಿದ್ದೆನೆಂದು ಹೇಳುವುದೆ ಅಲ್ಲದೆ ಗತಜನ್ಮದಲ್ಲಿನ ತನ್ನ ಮನೆಯಲ್ಲಿರುವವರೆಲ್ಲರ ಹೆಸರುಗಳನ್ನು ಹೇಳಿದ್ದಾಳೆ. ಆಗ ಆ ಹೆಣ್ಣು ಹುಡುಗಿ ಹಾಗೆ ಹೇಳುವುದು ಅವಳ ತಾಯಿ ತಂದೆಯರಿಗೆ ಇಷ್ಟವಿಲ್ಲ. ತಮ್ಮ ಮಗಳು ಈ ರೀತಿ ಎಂದು ತಿಳಿದರೆ ತಮಗಾಗಲಿ, ತಮ್ಮ ಮಗಳಿಗಾಗಲಿ ಗೌರವ ಇರುವುದಿಲ್ಲವೆಂದು ಆ ವಿಷಯವನ್ನು ಪಕ್ಕದಲ್ಲಿ ಯಾರಿಗೂ ತಿಳಿಯದಂತೆ ಮಾಡಿದ್ದಾರೆ. ಅದೇ ಮನೆಯ ಪಕ್ಕದಲ್ಲಿ ಇದ್ದ ನನಗೆ ನಮ್ಮ ಮನೆಯಲ್ಲಿರುವವರಿಗೆ ಆ ವಿಷಯ ಗೊತ್ತು. ಬಹುಶಃ ಐದಾರು

ತಿಂಗಳುಗಳು ಗತಜನ್ಮದ ಜ್ಞಾಪಕಗಳು ಆ ಹುಡುಗಿಗೆ ಆಗಾಗ ಬರುತ್ತಿದ್ದವು. ಅಷ್ಟೇ ಆಗಲಿ ಎಲ್ಲಾ ಸಮಯದಲ್ಲು ಆ ವಿಷಯಗಳು ಜ್ಞಾಪಕಕ್ಕೆ ಬರುತ್ತಿರಲಿಲ್ಲ. ಆರು ತಿಂಗಳುಗಳು ಕಳೆದುಹೋದ ನಂತರ ಅವಳಿಗೆ ಗತ ಜನ್ಮದ ಜ್ಞಾಪಕಗಳು ಬರದೆಹೋಗಿವೆ. ಅವಳ ಮನೆಯಲ್ಲಿರುವವರೆಲ್ಲ ಮತಿಸ್ಥಿಮಿತ ವಿಲ್ಲದ ವ್ಯಕ್ತಿ ಸತ್ತುಹೋಗಿ ದೆವ್ವವಾಗಿ ನಮ್ಮ ಹುಡುಗಿಯಲ್ಲಿ ಸೇರಿಕೊಂಡು ಹಾಗೆ ಹೇಳುತ್ತಿದ್ದಾನೆಂದು ತಿಳಿದುಕೊಳ್ಳುತ್ತಿದ್ದರಷ್ಟೆ, ಆತನು ಮತ್ತೆ ತಮ್ಮ ಮನೆಯಲ್ಲಿ ಹುಟ್ಟಿದ್ದಾನೆಂದು ತಿಳಿದುಕೊಳ್ಳುತ್ತಿರಲಿಲ್ಲ. ಆಗ ನಾನು ಸಹ ಆ ಚಿಕ್ಕಹುಡುಗಿಗೆ ಮತಿಸ್ಥಿಮಿತವಿಲ್ಲದ ವ್ಯಕ್ತಿ ಆವರಿಸಿಕೊಂಡು ಹೇಳುತ್ತಿದ್ದಾನೆಂದು ಅಂದುಕೊಂಡೆನು. ಆದರೆ ನನಗೆ ಸ್ವಲ್ಪ ಆತ್ಮಜ್ಞಾನ ತಿಳಿದನಂತರ ಈಗದು ದೆವ್ವವಲ್ಲ ಎಂದು, ನಿಜವಾಗಿ ಪುನರ್ಜನ್ಮವೇ ಎಂದು ಹೇಳುತ್ತಿದ್ದೇನೆ. ಇದೆಲ್ಲಾ ಹೇಳುವುದಕ್ಕೆ ಕಾರಣವೇನೆಂದರೆ! ಮತಿಸ್ಥಿಮಿತವಿಲ್ಲದ ವ್ಯಕ್ತಿ ಸತ್ತುಹೋದ ಕ್ಷಣದಲ್ಲಿಯೆ ಆತನು ಅದೇ ಬೀದಿಯಲ್ಲಿ ಶಿಶುವಾಗಿ ಜನ್ಮಿಸಿದ್ದಾನೆಂದು ನೆನಪಿಟ್ಟುಕೊಳ್ಳಬೇಕೆಂದು ಈ ವಿಷಯವನ್ನು ಹೇಳಿದ್ದೇನೆ. ಇದರಿಂದ, ಒಬ್ಬ ವ್ಯಕ್ತಿ ಸತ್ತುಹೋದ ತಕ್ಷಣವೆ ಮತ್ತೆ ಜನ್ಮಿಸುತ್ತಾನೆಂದು ಅರ್ಥವಾಗುತ್ತದೆ.

ಭಗವದ್ಗೀತೆಯಲ್ಲಿ ಭಗವಂತನು ಹಳೆಯ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದಂತೆ, ಒಬ್ಬ ಜೀವಿಯು ಹಳೆಯ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸುತ್ತಿದ್ದಾನೆಂದು ಹೇಳಿದ್ದಾನೆ. ಅಲ್ಲಿ ಆತನು ಹೇಳಿದ ಮಾತು ಶಾಸ್ತ್ರಬದ್ಧವಾಗಿದೆ ಮತ್ತು ಜೀವನಿಗೆ ಧರ್ಮಯುಕ್ತವಾದದ್ದು. ಭಗವಂತನು ಹೇಳಿದಂತೆ ಪುನರ್ಜನ್ಮ ಜ್ಞಾಪಕಕ್ಕೆ ಬಂದಿರುವವರ ವಿಷಯಗಳಲ್ಲಿ ಶರೀರ ಧರ್ಮಗಳು ನಿರೂಪಣೆಗೆ ಬಂದಿವೆ. ಹಳೆಯ ವಸ್ತ್ರವನ್ನು ಬಿಟ್ಟು ಹೊಸ ವಸ್ತ್ರವನ್ನು ಧರಿಸಿದಂತೆ, ಹಳೆ ಶರೀರವನ್ನು ಬಿಟ್ಟು ಹೊಸ ಶರೀರವನ್ನು ಧರಿಸಿದಂತೆ ಎಂದು ಹೇಳುವುದು, ನೂರಕ್ಕೆ ನೂರು ಪಾಲು ಮನುಷ್ಯನಿಗೆ ಪುನರ್ಜನ್ಮ ಇದೆಯೆಂದು ಹೇಳುವುದೆ ತಾನೆ! ಗೀತೆಯಲ್ಲಿನ ಅಕ್ಷರ ಪರಬ್ರಹ್ಮಯೋಗದಲ್ಲಿ ಐದು, ಆರು ಶ್ಲೋಕಗಳಲ್ಲಿ "ಮರಣಿಸುವ ಕೊನೆಯ ಸಮಯದಲ್ಲಿ ಯಾರಾದರೆ

ನನ್ನನ್ನೇ ಸ್ಮರಿಸಿಕೊಳ್ಳುತ್ತಾ ಸತ್ತುಹೋಗುವವನೋ ಅವನು ನನ್ನನ್ನೇ ಸೇರಿಹೋಗುವವನು. ಮನುಷ್ಯ ಯಾವ ಭಾವವನ್ನು ಸ್ಮರಿಸಿಕೊಳ್ಳುತ್ತಾ ಸತ್ತುಹೋಗುವನೋ ನಂತರ ಅದೇ ಭಾವವನ್ನು ಹೊಂದುತ್ತಿದ್ದಾನೆ. ದೇವರನ್ನು ಸ್ಮರಿಸಿಕೊಳ್ಳುತ್ತಾ ಸತ್ತುಹೋದವನು ಮತ್ತೆ ಜನ್ಮಿಸದೆ ದೇವರನ್ನೇ ಸೇರಿಹೋಗುವನು. ಪ್ರಕೃತಿ ವಿಷಯಗಳನ್ನು ಸ್ಮರಿಸಿಕೊಳ್ಳುತ್ತಾ ಸತ್ತು ಹೋದವನು ಮತ್ತೆ ಪ್ರಪಂಚದಲ್ಲಿ ಜನ್ಮಿಸುವನು." ಎಂದು ಭಗವಂತನು ಹೇಳಿದಂತೆ ಅರ್ಥವಾಗುತ್ತಿದೆ. ಹೀಗೆ ಭಗವದ್ಗೀತೆಯಲ್ಲಿ ಅನೇಕ ಕಡೆ ಮನುಷ್ಯನ ಪುನರ್ಜನ್ಮಗಳನ್ನು ಕುರಿತು ಬರೆದ ವಿಷಯಗಳಿವೆ. ಈ ವಿಧವಾಗಿ ಪುನರ್ಜನ್ಮಗಳಿವೆಯೆಂದು ತಿಳಿಯುವುದೆ ಅಲ್ಲದೆ ಮನುಷ್ಯ ಸತ್ತುಹೋದ ತಕ್ಷಣವೆ ಹುಟ್ಟುತ್ತಿದ್ದಾನೆನ್ನುವ ವಿಷಯವನ್ನು ಸಹ ಗೀತೆಯಲ್ಲಿ ಅನೇಕಸಲ ಭಗವಂತನು ಹೇಳಿದ ಹಾಗೆ ಇದೆ.

ಬ್ರಹ್ಮವಿದ್ಯಾ ಶಾಸ್ತ್ರವಾದ ಭಗವದ್ಗೀತೆ ಪ್ರಕಾರ ಒಬ್ಬ ಜೀವಿಯು ಸತ್ತುಹೋದ ನಂತರ ಆ ಕ್ಷಣವೆ ಜನ್ಮಿಸುತ್ತಿದ್ದಾನೆಂದು, ಹಾಗೆ ಜನ್ಮಿಸಿದ ನಂತರ ಪಾಪ ಪುಣ್ಯಗಳನ್ನು ಕಷ್ಟಸುಖಗಳ ರೂಪದಲ್ಲಿ ಜೀವನದಲ್ಲಿ ಅನುಭವಿಸುತ್ತಿದ್ದಾನೆಂದು ಅರ್ಥವಾಗುತ್ತಿದೆ. ಗೀತೆಯನ್ನು ಹೇಳಿದ ಭಾರತದೇಶದಲ್ಲಿಯೂ ಮತ್ತು ಬೈಬಲ್, ಖುರಾನ್ ಹೇಳಿರುವ ದೇಶಗಳಲ್ಲಿಯೂ, ಅಷ್ಟೇ ಅಲ್ಲದೆ ಪ್ರಪಂಚದ ಒಟ್ಟು ದೇಶಗಳಲ್ಲಿಯೂ ಗೀತೆಯಲ್ಲಿ ಹೇಳಿದಂತೆ ಪುನರ್ಜನ್ಮಗಳು ಕಂಡುಬಂದ ಹಾಗೆ ತಿಳಿದಿರುವುದು ನಡೆದಿದೆ. ಇದರಿಂದ ಗೀತೆ ಮಾತು ಪ್ರಪಂಚದ ಮೊತ್ತಕ್ಕೆ ಅನ್ವಯಿಸುತ್ತದೆಂದು ತಿಳಿಯುತ್ತದೆ. ನಡೆದಿರುವ ಪ್ರತ್ಯಕ್ಷ ಸತ್ಯವನ್ನು ಅನುಸರಿಸಿ ಬೈಬಲ್‌ನಲ್ಲೂ, ಖುರಾನ್‌ನಲ್ಲೂ ಪುನರ್ಜನ್ಮಗಳು ಇಲ್ಲವೆಂದು ಹೇಳಲಿಲ್ಲವೆಂದು, ಹಾಗೆ ಹೇಳಿದ್ದರೆ ದೇವರ ಮಾತಿಗೆ ವಿರುದ್ಧವಾಗಿ ನಡೆಯುವುದಕ್ಕೆ ಅವಕಾಶ ಇಲ್ಲವೆಂದು, ನಡೆದ ಪ್ರತ್ಯಕ್ಷ ಪ್ರಮಾಣವನ್ನು ಅನುಸರಿಸಿದರೆ, ಎಲ್ಲ ಮತ ಗ್ರಂಥಗಳಲ್ಲಿಯೂ ಹೇಳಿರುವವನು ಒಬ್ಬನೇ ಎಂದು, ಪ್ರವಕ್ತರು ಬೇರೆಬೇರೆಯಾದರು ಹೇಳಿರುವ ಜ್ಞಾನ ಒಂದೇ ಎಂದು, ಆದ್ದರಿಂದ ಹೇಳಿರುವುದೇ ನಡೆದಿದೆಯೆಂದು, ನಡೆದಿರುವುದನ್ನು ಅನುಸರಿಸಿ

ನೋಡಿದರೆ ಪುನರ್ಜನ್ಮಗಳಿವೆಯೆಂದು ತಿಳಿದುಹೋಗಿದೆ. ಅಷ್ಟೇ ಅಲ್ಲದೆ ಪುನರ್ಜನ್ಮಗಳೆನ್ನುವವು ಯಾವ ಮತದವರಿಗೂ ವಿರುದ್ಧವಾದವುಗಳಲ್ಲ ಎನ್ನುವುದಕ್ಕೆ ನಿದರ್ಶನವಾಗಿ, ಎಲ್ಲಾ ಮತಗಳಲ್ಲಿಯೂ ಪುನರ್ಜನ್ಮಗಳು ನಡೆದ ಹಾಗೆ, ಅವರಲ್ಲಿ ಕೆಲವರಿಗೆ ಗತ ಜನ್ಮಜ್ಞಾಪಕಗಳು ಬಂದಂತೆ, ಅವೆಲ್ಲವನ್ನು ವಿಚಾರಿಸಿದಾಗ ಸತ್ಯವೆ ಎಂದು ತಿಳಿದುಹೋಗಿದೆ. ಅಷ್ಟೇ ಅಲ್ಲದೆ ಒಬ್ಬ ಮುಸ್ಲಿಮ್ ಮತ್ತೊಬ್ಬ ಮುಸ್ಲಿಮ್ ಮನೆಯಲ್ಲಿ ಹುಟ್ಟಿದಂತೆ, ಒಬ್ಬ ಕ್ರಿಷ್ಟಿಯನ್ ಅದೇ ಮತಕ್ಕೆ ಸಂಬಂಧಿಸಿದ ಮತ್ತೊಬ್ಬ ಕ್ರಿಷ್ಟಿಯನ್ ಮನೆಯಲ್ಲಿ ಹುಟ್ಟಿದ ಹಾಗೆ, ಒಬ್ಬ ಇಂದೂ (ಹಿಂದೂ) ಮತ್ತೊಬ್ಬ ಇಂದೂವಿನ ಮನೆಯಲ್ಲಿ ಹುಟ್ಟಿದಹಾಗೆ ನಿರೂಪಣೆಗೆ ಬಂದಿದೆ. ಅಷ್ಟೇ ಅಲ್ಲದೆ ಇಂದೂಗಳು, ಮುಸ್ಲಿಮ್ ಮತ್ತು ಕ್ರೈಸ್ತನ ಮನೆಯಲ್ಲಿ ಹುಟ್ಟಿದ ಹಾಗೆ ತಿಳಿದಿದೆ. ಇದರಿಂದ ಮತ ಎನ್ನುವುದು ಬದುಕಿದ ಮನುಷ್ಯನಿಗಾಗಗಲಿ, ಸತ್ತುಹೋದವರ ಹಿಂದೆ ಮತ ಬರುವುದಿಲ್ಲವೆಂದು, ಒಬ್ಬ ಮತಸ್ಥನು ಸತ್ತುಹೋದ ನಂತರ ಯಾವ ಮತದಲ್ಲಾದರೂ ಹುಟ್ಟಬಹುದೆಂದು, ತಾನು ಹುಟ್ಟಿದ ಕುಟುಂಬ ಯಾವ ಮತಕ್ಕೆ ಸೇರಿದೆಯೊ ತಾನು ಆ ಮತಸ್ಥನೆಂದು ತಿಳಿದುಕೊಳ್ಳುವುದು ನಡೆಯುತ್ತದೆಂದು, ಮತ ಮನುಷ್ಯ ಏರ್ಪಡಿಸಿಕೊಂಡಿರುವುದೆ ಆಗಲಿ, ದೇವರು ಏರ್ಪಡಿಸಿರುವುದಲ್ಲ ಎಂದು ತಿಳಿಯುತ್ತದೆ. ಪರಮತ ದ್ವೇಷ ಎನ್ನುವುದು ಒಬ್ಬ ಮನುಷ್ಯನಲ್ಲಿ ಇದ್ದರೆ ಆ ಮನುಷ್ಯ ಯಾವ ಮತದಲ್ಲಿ ಹುಟ್ಟಿದ್ದರು ತನ್ನ ಮತವನ್ನು ದೊಡ್ಡದಾಗಿ ಹೇಳಿಕೊಳ್ಳುವುದು, ಪರಮತವನ್ನು ದ್ವೇಷಿಸುವುದು ನಡೆಯುತ್ತದೆ. ಉದಾಹರಣೆಗೆ ಒಬ್ಬ ಹಿಂದೂ ಕ್ರೈಸ್ತ ಮತವನ್ನು ದ್ವೇಷಿಸುವವನಾದರೆ, ಆತನು ಪುನರ್ಜನ್ಮದಲ್ಲಿ ಕ್ರೈಸ್ತನಾಗಿ ಹುಟ್ಟಿದರೆ ತನ್ನ ಕ್ರೈಸ್ತ ಮತವನ್ನು ದೊಡ್ಡದಾಗಿ ಹೇಳಿಕೊಳ್ಳುತ್ತಾ, ಹಿಂದೂ ಮತವನ್ನು ದ್ವೇಷಿಸುತ್ತಿರುವನು. ಗತ ಜನ್ಮದಲ್ಲಿ ಹಿಂದೂ ಮತವನ್ನು ದೊಡ್ಡದಾಗಿ ಹೇಳಿಕೊಂಡು ಕ್ರೈಸ್ತವನ್ನು ದೂಷಿಸಿದವನು ಸತ್ತುಹೋಗಿ, ತಿರುಗಿ ಕ್ರೈಸ್ತನಾಗಿ ಜನ್ಮಿಸಿ ಕ್ರೈಸ್ತವನ್ನು ಹೊಗಳುತ್ತಾ ಹಿಂದೂತ್ವವನ್ನು ದೂಷಿಸುವುದಕ್ಕೆ ಕಾರಣ ಆತನಲ್ಲಿರುವ ಪರಮತ ದ್ವೇಷ ಎನ್ನುವ ಗುಣ ಪ್ರಭಾವವೇ ಹೊರತು ಬೇರೆಯಲ್ಲ. ಇದರಿಂದ **ಮತಗಳು**

**ಮನುಷ್ಯನ ಜೀವನಕ್ಕೆ ಹದ್ದುಗಳನ್ನು ಏರ್ಪಡಿಸುತ್ತವಾಗಲಿ, ಮನುಷ್ಯನ ಜನ್ಮಗಳಿಗೆ ಹದ್ದುಗಳನ್ನು ಏರ್ಪಡಿಸಿಲ್ಲವೆಂದು ತಿಳಿಯುತ್ತದೆ.** ಆದ್ದರಿಂದ ಒಂದು ಜೀವನಕ್ಕೆ ಪರಿಮಿತವಾದ ಮತವನ್ನು ಬಿಟ್ಟು, ಎಲ್ಲ ಜನ್ಮಗಳಿಗು ಸಂಬಂಧವಾದ ದೇವರನ್ನು ತಿಳಿದುಕೊಳ್ಳಬೇಕೆಂದು ತಿಳಿಸುತ್ತಿದ್ದೇವೆ.

ಪುನರ್ಜನ್ಮವನ್ನು ಕುರಿತು ಸ್ವಲ್ಪ ವಿವರವನ್ನು ಇಲ್ಲಿಯವರೆಗು ತಿಳಿದುಕೊಂಡಿದ್ದೇವೆ. ಯಾವನಿಗಾದರು ಅವನ ಪುನರ್ಜನ್ಮ ವಿಷಯ ತಿಳಿಯಬೇಕೆಂದರೆ ಅವನಲ್ಲಿನ ಆತ್ಮ ತಿಳಿಸಬೇಕಾದದ್ದೆ ಆಗಲಿ, ಆತ್ಮ ಅಲ್ಲದೆ ಯಾರೂ ತಿಳಿಸುವುದಕ್ಕೆ ಅವಕಾಶವಿಲ್ಲ. ಯಾವನೊಳಗಿರುವ ಆತ್ಮವಾದರು ಅವನ ಮಾತು ಕೇಳುವುದಿಲ್ಲ. ಯಾವನಲ್ಲಿರುವ ಆತ್ಮವಾದರು ಅವನ ಕರ್ಮವನ್ನನುಸರಿಸಿ ಸ್ವತಃವಾಗಿ ಕೆಲಸ ಮಾಡುತ್ತದಾಗಲಿ, ಜೀವಾತ್ಮ ಹೇಳಿದ ಹಾಗಾಗಲಿ, ಮನಸ್ಸು ಬಯಸಿದ ಹಾಗೆ ಆಗಲಿ ನಡೆದುಕೊಳ್ಳುವುದಿಲ್ಲ. ಶರೀರದಲ್ಲಿ ಆತ್ಮ ಸ್ವತಂತ್ರವಾದದ್ದು. ಆತ್ಮ ತನ್ನ ಇಷ್ಟದಿಂದ ತಿಳಿಸಿದರೆ ಗತ ಜನ್ಮದ ವಿವರ ತಿಳಿಯುತ್ತದೆ. ಹಾಗಲ್ಲದೆ ಜೀವನು ಬಯಸಿದರೆ ಆತ್ಮ ಯಾವಮಾತ್ರವು ತಿಳಿಸುವುದಿಲ್ಲ. ನೀನು ನಿನ್ನ ಶರೀರದಲ್ಲಿನ ಆತ್ಮವನ್ನು ಪೂಜಿಸಿ ಕೇಳಿದರೂ, ನಮಸ್ಕರಿಸಿ ಕೇಳಿದರೂ, ಆತ್ಮ ಜೀವಾತ್ಮದವೊಂದು ಮಾತು ಕೇಳುವುದಿಲ್ಲ, ನಿನ್ನ ಆತ್ಮಕ್ಕೆ ನಿನ್ನ ಹಿಂದಿನ ಜನ್ಮಗಳು ಚೆನ್ನಾಗಿ ತಿಳಿದಿದ್ದರು ಯಾಮಾತ್ರವು ಹಿಂದಿನ ಜನ್ಮವನ್ನು ಕುರಿತು ನಿನಗೆ ತಿಳಿಸುವುದಿಲ್ಲ. ಆತ್ಮ ನಿನ್ನ ಮಾತನ್ನೇ ಕೇಳದಿದ್ದಾಗ, ಯಾವನೊ ಪಕ್ಕದವನು ಹೇಳಿದರೆ ಅವನ ಮಾತು ಕೇಳುತ್ತದಾ? ನಿನ್ನ ಪಕ್ಕದವನು ದೇಶಕ್ಕೆ ರಾಜನಾದರೂ, ಪ್ರಪಂಚಕ್ಕೆ ಪ್ರಮುಖನಾದರು ಯಾವನ ಮಾತು ಕೇಳುವುದಿಲ್ಲ. ಆದ್ದರಿಂದ ಯಾವನಾದರು ತಮ್ಮ ಇಷ್ಟ ಪ್ರಕಾರವಾಗಲಿ, ಇತರರ ಇಷ್ಟ ಪ್ರಕಾರವಾಗಲಿ ತಮ್ಮ ಗತಜನ್ಮವನ್ನು ಕುರಿತು ತಿಳಿದುಕೊಂಡಿರುವ ವನಿಲ್ಲ. ಆದರೆ ಈಗ ಕೆಲವರು ಒಂದು ಪ್ರಶ್ನೆ ಕೇಳಬಹುದು. ಅದೇನೆಂದರೆ! ಪ್ರಸ್ತುತ ಕಾಲದಲ್ಲಿ ಕೆಲವರು ಉನ್ನತವಾದ ಓದನ್ನು ಓದಿದ ಡಾಕ್ಟರುಗಳು ಪಾಸ್ಟ್‌ಲೈಫ್ ರಿಗ್ರೆಷನ್ ಥೆರಪಿ ಎನ್ನುವ ವಿಧಾನದಿಂದ ಕೆಲವರ ಗತಜನ್ಮದ

ವಿಷಯಗಳನ್ನು ಅವರಿಂದಲೆ ಹೇಳಿಸುತ್ತಿದ್ದಾರೆ ತಾನೆ! ಅದನ್ನು ಕುರಿತು ನೀವು ಏನಂತೀರ ಎಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ. ಈ ಮಧ್ಯದಲ್ಲಿ "ಮಾ" ಟಿ.ವಿ ಛಾನಲ್‌ನಲ್ಲಿ ಸ್ವಲ್ಪಕಾಲ, ಎಂ.ಡಿ. ಓದಿದ ಡಾಕ್ಟರು ಒಬ್ಬನು ಕೆಲವರಿಂದ ಅವರಿಗೆ ತಿಳಿಯದೇನೇ ಅವರಿಂದ ಅವರ ಗತ ಜನ್ಮ ವಿಷಯಗಳನ್ನು ಹೇಳಿಸುತ್ತಿರುವುದನ್ನು ನಾನು ಸಹ ನೋಡಿದ್ದೇನೆ. ಆ ಡಾಕ್ಟರವರು ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಮುಖಾಂತರ ಇತರರ ಪೂರ್ವಜನ್ಮಗಳ ವಿಷಯಗಳನ್ನು ಅವರ ಮುಖಾಂತರವೆ ಹೇಳಿಸಬಹುದೆಂದು ಹೇಳುವುದನ್ನು ಸಹ ಕೇಳಿದ್ದೇನೆ. ಆತನು ದೊಡ್ಡ ಓದು ಓದಿದ ಎಂ.ಡಿ.ಡಾಕ್ಟರು ಆದ್ದರಿಂದ ಆತನು ಹೇಳುವ ಮಾತನ್ನು ಯಾರಾದರು ಸುಲಭವಾಗಿ ನಂಬುತ್ತಾರೆ. ಒಂದು ರೋಗದ ನಿವಾರಣೆಗೆ ಇರುವ ವೈದ್ಯ ವಿಧಾನವನ್ನು ಥೆರಪಿ ಎನ್ನುತ್ತಾರೆ. ಮನುಷ್ಯನಿಗೆ ಅನೇಕ ವಿಧ ರೋಗಗಳಿವೆ. ಹಾಗೆ ಅವುಗಳನ್ನು ನಿವಾರಣೆ ಮಾಡುವುದಕ್ಕೆ ಅನೇಕ ಮೆಡಿಕಲ್ ಥೆರಪಿಗಳು ಸಹ ಇವೆ. ಗತಜನ್ಮ ವಿಷಯಗಳನ್ನು ಮನುಷ್ಯನಿಂದ ಹೇಳಿಸುವುದು ಸಹ ಒಂದು ವಿಧಾನ, ಆದ್ದರಿಂದ ಡಾಕ್ಟರುಗಳು ಅದನ್ನೇ ಥೆರಪಿ ಎನ್ನುವುದು ನಡೆದಿದೆಯೇನೊ! ಹೈದರಾಬಾದ್‌ನಲ್ಲಿ ಇಬ್ಬರು ಮೂವರು ಡಾಕ್ಟರುಗಳು ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿಸ್ಟುಗಳಾಗಿ ಇದ್ದಾರೆ. ಅಂತಹ ಬೋರ್ಡು ಇಟ್ಟುಕೊಂಡ ಒಬ್ಬ ಡಾಕ್ಟರು ಹತ್ತಿರಕ್ಕೆ ಹೋಗಿ ಅವರ ಥೆರಪಿಯಲ್ಲಿನ ವಿವರವೇನೊ ತಿಳಿದುಕೊಳ್ಳಬೇಕೆಂದುಕೊಂಡಿದ್ದೇವೆ. ತಕ್ಷಣವೆ ಆತನಿಗೆ ಫೋನ್ ಮಾಡಿ ನನಗೆ ನಿದ್ರೆ ಬರುತ್ತಿಲ್ಲ ನೀವು ನಿಮಗೆ ತಿಳಿದ ಪದ್ಧತಿಯಲ್ಲಿ ನನಗೆ ನಿದ್ರೆ ಬರುವಹಾಗೆ ಮಾಡುತ್ತೀರ ಎಂದು ಕೇಳಿದೆನು. ಆಗ ಆತನು ತಪ್ಪದೆ ಮಾಡುತ್ತೇನೆ, ಆದರೆ ನನ್ನ ಫೀಜು ನಿಮಗೆ ತಿಳಿದಿದೆಯಾ ಎಂದು ಕೇಳಿದನು. ನೀವು ಹೇಳಿದರೆ ನಮಗೆ ತಿಳಿಯುತ್ತದೆ ಎಂದು ಹೇಳಿದೆವು. ಆಗ 5 ಸಾವಿರ ಕೊಡಬೇಕೆಂದು ಹೇಳಿದನು. ಮರುದಿನ ಐದುಸಾವಿರ ತೆಗೆದುಕೊಂಡು ಹೋಗಿ ಆತನಿಗೆ ಕೊಟ್ಟು, ಅಲ್ಲಿ ಆತನು ಯಾವ ವಿಧಾನವನ್ನು ಉಪಯೋಗಿಸುತ್ತಾನೆಂದು ಗಮನಿಸಿದೆವು. ಸಾಧಾರಣ ವ್ಯಕ್ತಿಯಾಗಿ ಹೋದ ನನ್ನನ್ನು ನೋಡಿ ನೀವು ವಾರದ ದಿನಗಳವರೆಗು ಬಂದರೆ ನಿಮಗಿರುವ ನಿದ್ರೆ

ಕಡಿಮೆ ಹೋಗುತ್ತದೆ ಎಂದು ಹೇಳಿದನು. ಆ ದಿನ ಅಲ್ಲಿ ಆತನ ಹತ್ತಿರ ಬೆಳಿಗ್ಗೆ 11 ಗಂಟೆಯಿಂದ ಮಧ್ಯಾಹ್ನ ಎರಡು ಗಂಟೆಗಳವರೆಗು ಇದ್ದೆವು. ಅಗ ನಮ್ಮ ಸಮಕ್ಷಮದಲ್ಲಿ ಬಹಳಜನ ಅನೇಕ ಸಮಸ್ಯೆಗಳಿಂದ ಬಂದಿದ್ದಾರೆ. ಅದರಲ್ಲಿ ಗತಜನ್ಮ ವಿಷಯಗಳನ್ನು ಒಬ್ಬರಿಂದ ಹೇಳಿಸುವುದನ್ನು ನಾವು ಹತ್ತಿರದಿಂದ ನೋಡಿದೆವು. ಅಷ್ಟೇ ಅಲ್ಲದೆ ಆ ಡಾಕ್ಟರು ಹೇಗೆ ಹೇಳಿಸುತ್ತಿದ್ದಾನೆಂದು ಸಹ ನೋಡಿದೆವು.

ಆಗ ನಮಗೆ ಅರ್ಥವಾದುದನ್ನು ಅನುಸರಿಸಿ ನಾವು ಅ ಡಾಕ್ಟರ್ ರವರಿಗೆ ಕೆಲವು ಪ್ರಶ್ನೆಗಳನ್ನ ಕೇಳಿದೆವು. ನಾವು ಸರ್ವಸಾಧಾರಣ ಜ್ಞಾನ ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಮಾತ್ರ ಕೇಳಿದೆವು. ಗತ ಜನ್ಮದ ವಿಷಯಗಳನ್ನು ಕುರಿತು ಕೇಳಲಿಲ್ಲ. ಆತನು ಹೇಳಿದ ಸಮಾಧಾನಗಳನ್ನು ಅನುಸರಿಸಿ ನೋಡಿದರೆ ಸರ್ವಸಾಧಾರಣ ಜ್ಞಾನವು ಸಹ ಆತನಿಗೆ ತಿಳಿಯದೆಂದು ನಮಗೆ ಅರ್ಥವಾಯಿತು. ಆತ್ಮ ಅಂದರೆ ಏನು, ಆತ್ಮ ಜ್ಞಾನವೆಂದರೆ ಏನೋ ತಿಳಿಯದ ಅವರು ಹಿಂದಿನ ಜನ್ಮ ಸಮಾಚಾರವನ್ನು ಇತರರಿಂದ ಹೇಳಿಸುವುದು ನಮಗೆ ಆಶ್ಚರ್ಯವನ್ನು ಉಂಟುಮಾಡಿಸಿತು. ಇಲ್ಲಿಗೆ ಎಷ್ಟೋಜನ ಸ್ವಾಮೀಜಿಗಳ ವೇಷದಿಂದ ಪ್ರಜೆಗಳನ್ನು ಮೋಸ ಮಾಡುತ್ತಾ, ಸ್ವಾಮಿಜಿಯಾಗಿ ಅಥವಾ ಡಾಕ್ಟರ್ ಅಗಿ ಇದ್ದು ಹೊಸದಾಗಿ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎನ್ನುವ ಹೆಸರಿನಿಂದ ಪ್ರಜೆಗಳನ್ನು ಮೋಸಪಡಿಸಿ, ತಾವು ದೊಡ್ಡವರೆಂದು ಅನ್ನಿಸಿಕೊಳ್ಳುವುದೂ, ನಮಗೆ ವಿಚಿತ್ರವಾಗಿ ಕಾಣಿಸಿತು. ಅವರಿಗೆ ತಾವು ಮಾಡುತ್ತಿರುವುದು ದೈವಜ್ಞಾನ ವಿರುದ್ಧವಾದದ್ದೆಂದು, ಪ್ರಜೆಗಳನ್ನು ಮೋಸ ಗೊಳಿಸುವುದೆಂದು ತಿಳಿದಿದೆಯೊ, ತಿಳಿದಿಲ್ಲವೊ, ಆದರೆ ಪ್ರಜೆಗಳು ಮಾತ್ರ ನೂರಕ್ಕೆ ನೂರುಪಾಲು ಮೋಸಹೋಗುತ್ತಿದ್ದಾರೆ. ಅವರು ಮಾಡುತ್ತಿರುವುದು ಪ್ರಜೆಗಳನ್ನು ಮೋಸಮಾಡುತ್ತಿದ್ದಾರೆಂದು ಹೇಗೆ ಹೇಳುತ್ತಿದ್ದೇವೆಂದರೆ! ಮನುಷ್ಯರಲ್ಲಿ ಮನಸ್ಸು ಎನ್ನುವುದು ಒಂದಿದೆ, ಅದಕ್ಕೆ ಎರಡು ಕೆಲಸಗಳಿವೆಯೆಂದು ತಿಳಿದುಕೊಂಡಿದ್ದೇವೆ ತಾನೆ! ಅಂತಹ ಮನಸ್ಸು ಕೆಲವರಲ್ಲಿ ಬಲವಾಗಿ, ಕೆಲವರಲ್ಲಿ

ಬಲಹೀನವಾಗಿ ಇರುತ್ತದೆ. ಅಂತಹ ಮಾನಸಿಕ ಬಲಹೀನರನ್ನು ಸೈಕಾಲಜಿಸ್ಟ್ ಆದ ಡಾಕ್ಟರುಗಳು ಗುರುತಿಸಬಲ್ಲರು. ಅವರ ಮನಸ್ಸನ್ನು ತಮ್ಮ ಆಧೀನದೊಳಗೆ ತಂದುಕೊಳ್ಳುತ್ತಾರೆ. ತಮ್ಮ ಅಧೀನದೊಳಗೆ ಇತರರ ಮನಸ್ಸನ್ನು ತಂದುಕೊಳ್ಳುವುದನ್ನೇ ಈ ದಿನ ನವೀನ ಭಾಷೆಯಲ್ಲಿ ಹಿಪ್ನಟೈಜ್ ಮಾಡುವುದು ಎನ್ನುತ್ತಾರೆ. ಒಬ್ಬ ಮನುಷ್ಯನನ್ನು ಹಿಪ್ನಟೈಜ್ ಮಾಡುವಂತಹ ವ್ಯಕ್ತಿ ಎದುರಿರುವ ಮನುಷ್ಯನ ಮನಸ್ಸು ತಮ್ಮ ಮಾತಿಗೆ ಮಾತನಾಡುವಂತೆ, ನುಡಿಯುವಂತೆ ತಮ್ಮ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವಂತೆ ಮಾಡಿಕೊಳ್ಳುತ್ತಾರೆ. ಇಲ್ಲಿ ಪ್ರತಿಯೊಬ್ಬರೂ ಗಮನಿಸಬೇಕಾದ ವಿಷಯವೇನೆಂದರೆ! ಯಾವ ಮಾತಿಗಾದರೂ ಉತ್ತರ ಹೇಳುವ ಸಾಮರ್ಥ್ಯ, ವಿಜ್ಞತ ಶರೀರದಲ್ಲಿ ಒಂದು ಬುದ್ಧಿಗೆ ಮಾತ್ರವೆ ಇರುತ್ತದೆ. ಮನಸ್ಸಿಗೆ ಉತ್ತರ ಹೇಳುವ ಸಾಮರ್ಥ್ಯವಿಲ್ಲ. ಆಗಿರುವಾಗ ಹಿಪ್ನಟೈಜ್ ಆದವರು ಹಿಪ್ನಟೈಜ್ ಮಾಡಿದ ವ್ಯಕ್ತಿಗಳು ಕೇಳಿದ ಪ್ರಶ್ನೆಗಳಿಗೆ ಉತ್ತರಗಳು ಹೇಗೆ ಹೇಳುತ್ತಿದ್ದಾರೆಂದು ನೀವು ನನ್ನನ್ನು ಪ್ರಶ್ನಿಸಬಹುದು. ಅದಕ್ಕೆ ಉತ್ತರ ಏನೆಂದರೆ! ಇಂತಹ ಪ್ರಶ್ನೆ ಬರಬೇಕೆಂದೆ ನಾನು ಸಹ ಅಂದುಕೊಳ್ಳುತ್ತಿದ್ದೇನೆ. ಪ್ರಶ್ನೆ ಬಂದಾಗಲೆ ಆ ವಿಷಯವನ್ನು ಶ್ರದ್ಧೆಯಿಂದ ನೋಡುತ್ತಾರೆ.

ಹಿಪ್ನಟೈಜ್ ಎನ್ನುವ ಆಂಗ್ಲ ಪದಕ್ಕೆ ಕನ್ನಡದಲ್ಲಿ ಸಮ್ಮೋಹನ ಎನ್ನುವ ಅರ್ಥ ಬರುತ್ತದೆಂದು ಎಂದುಕೊಳ್ಳುತ್ತೇನೆ. ಒಬ್ಬ ಮನುಷ್ಯನಿಂದ ಹಿಪ್ನಟೈಜ್ ಮಾಡಲಾಗಿದ್ದ ವ್ಯಕ್ತಿ ಹಿಪ್ನಟೈಜ್ ಮಾಡಿದ ವ್ಯಕ್ತಿ ಹೇಗೆ ಹೇಳಿದರೆ ಹಾಗೆ ಕೇಳುವನು. ಇಲ್ಲಿ ಜೀವಾತ್ಮನಿಗೆ ಯಾವ ಮಾತ್ರವು ಸಂಬಂಧ ಇರುವುದಿಲ್ಲ. ಸಮ್ಮೋಹನ (ಹಿಪ್ನಟೈಜ್) ಮಾಡಿಸಿಕೊಂಡವನ ಮನಸ್ಸು ಮಾತ್ರ, ಹಿಪ್ನಟೈಜ್ ಮಾಡಿದವನು ಹೇಳುವ ಮಾತಿನ ಪ್ರಕಾರ ಅಥವಾ ಆತನು ನೆನೆಸಿಕೊಳ್ಳುವ (ಜ್ಞಾಪಿಸಿಕೊಳ್ಳುವ) ಉದ್ದೇಶದ ಪ್ರಕಾರ ಪ್ರವರ್ತಿಸುತ್ತದೆ. ಜೀವಾತ್ಮನನ್ನು ಏನೂ ತಿಳಿಯದ ನಿದ್ರೆಯಂತಹ ಸ್ಥಿತಿಯೊಳಗೆ ಕಳುಹಿಸಿ, ಮನಸ್ಸನ್ನು ಮಾತ್ರ ತಮ್ಮ ಸ್ವಾಧೀನದೊಳಗೆ ತಂದುಕೊಳ್ಳುವುದನ್ನು ಹಿಪ್ನಟೈಜ್ ಎಂದು ವಿಶದೀಕರಿಸಿಕೊಂಡು ಹೇಳಬಹುದು. ಶರೀರದಲ್ಲಿನ ಒಂದು ಮನಸ್ಸು ಮಾತ್ರ ಹಿಪ್ನಟೈಜ್ ಆಗುವುದರಿಂದ

ಹಿಪ್ನಟೈಜ್‌ನಲ್ಲಿ ನಡೆಯುವ ಯಾವುವು ಜೀವಾತ್ಮನಿಗೆ ತಿಳಿಯವು, ಹಾಗೆ ಬುದ್ಧಿಗೆ ಸಹ ತಿಳಿಯುವುದಿಲ್ಲ. ಹಿಪ್ನಟೈಜ್ ಮಾಡಿಸಿಕೊಂಡ ವ್ಯಕ್ತಿಯ ಮನಸ್ಸು ಹಿಪ್ನಟೈಜ್ ಮಾಡಿದ ವ್ಯಕ್ತಿಯ ಆಧೀನದಲ್ಲಿ ಇರುವುದರಿಂದ, ಆತನು ಹೊರಗಡೆ ಕೇಳಿಸುವ ಹಾಗೆ ಹೇಳುವ ಮಾತಿನ ಪ್ರಕಾರವಾಗಲಿ, ಒಳಗಡೆ ಕೇಳಿಸದೆ ಹೇಳುವ ಮಾತಿನ ಪ್ರಕಾರವಾಗಲಿ ನಡೆದುಕೊಳ್ಳುವುದು. ಇಲ್ಲಿ ಚೆನ್ನಾಗಿ ಅರ್ಥಮಾಡಿಕೊಳ್ಳುವುದಕ್ಕೆ ಒಂದು ಉದಾಹರಣೆಯನ್ನು ತಿಳಿಸುತ್ತೇನೆ ನೋಡಿರಿ. ಹಿಪ್ನಟೈಜ್ ಮಾಡಿದ ವ್ಯಕ್ತಿ ಹಿಪ್ನಟೈಜ್ ಆದ ವ್ಯಕ್ತಿಯೊಂದಿಗೆ ಪಕ್ಕದಲ್ಲಿರುವವರೆಲ್ಲ ಕೇಳುವಹಾಗೆ ಹೋದ ಜನ್ಮದಲ್ಲಿ ನೀನು ಎಷ್ಟುಕಾಲ ಬದುಕಿದ್ದೀಯ ಎಂದು ಕೇಳಿದರು. ಆಗ ಹಿಪ್ನಟೈಜ್ ಆದ ವ್ಯಕ್ತಿ ಕಣ್ಣು ಮುಚ್ಚಿಕೊಂಡಿದ್ದು, ಕೇಳಿದ ಪ್ರಶ್ನೆಗೆ ನಾನು ಗತಜನ್ಮದಲ್ಲಿ 60 ವರ್ಷಗಳು ಬದುಕಿದ್ದೇನೆ ಎಂದು ಹೇಳಿದನು. ಹೇಗೆ ಸತ್ತುಹೋಗಿದ್ದೆ ಎಂದು ಕೇಳಿದರೆ ಅದಕ್ಕೆ ಉತ್ತರವಾಗಿ ನಾನು ನೀರಿನಲ್ಲಿ ಮುಳುಗಿ ಸತ್ತುಹೋಗಿದ್ದೇನೆಂದು ಹೇಳಿದ್ದಾರೆ. ಇಲ್ಲಿ ಕೇಳಿದ ಎರಡು ಪ್ರಶ್ನೆಗಳಿಗೆ ಎರಡು ಉತ್ತರಗಳನ್ನು ಹಿಪ್ನಟೈಜ್ ಆದ ವ್ಯಕ್ತಿ ಹೇಳಿದ್ದಾರೆ. ಪಕ್ಕದಿಂದ ನೋಡಿದವರಿಗೆ ಹಿಪ್ನಟೈಜ್ ಮಾಡಿದ ವ್ಯಕ್ತಿ ಕೇಳಿದ ಪ್ರಶ್ನೆಗಳು ಗೊತ್ತು, ಹಿಪ್ನಟೈಜ್ ಆದ ವ್ಯಕ್ತಿ ಹೇಳಿದ ಉತ್ತರಗಳು ಗೊತ್ತು. ಆದರೆ ಇಲ್ಲಿ ಯಾರಿಗೂ ತಿಳಿಯದ ರಹಸ್ಯ ಒಂದಿದೆ. ಅದೇನೆಂದರೆ! ಮನುಷ್ಯನಿಗೆ ಉತ್ತರ ಹೇಳುವ ಸಾಮರ್ಥ್ಯ ಇಲ್ಲವೆಂದು ಮೊದಲೆ ಹೇಳಿದ್ದೇವೆ ಅಲ್ಲವೆ! ಅದರ ಪ್ರಕಾರ ಹಿಪ್ನಟೈಜ್ ಆದ ವ್ಯಕ್ತಿ ಉತ್ತರವನ್ನು ಸ್ವತಃವಾಗಿ ಹೇಳಲಿಲ್ಲ. ಆದರೆ ನಾವು ನೋಡುತ್ತಿದ್ದಹಾಗೆ ಉತ್ತರ ಬಂದಿದೆ. ಆದರೆ ಹೇಗೆ ಉತ್ತರ ಬಂದಿದೆಯೆಂದರೆ! ಯಾರಾದರೆ ಪ್ರಶ್ನಿಸಿದ್ದಾರೊ ಆತನೆ ಎದುರು ಮನುಷ್ಯನ ಶರೀರದಲ್ಲಿನ ಮನಸ್ಸಿನಿಂದ ಉತ್ತರವನ್ನು ಹೇಳುವಹಾಗೆ ಮಾಡಿದ್ದಾರೆ. ಪ್ರಶ್ನಿಸಿದ ವ್ಯಕ್ತಿ ತನ್ನ ಮನಸ್ಸಿನಲ್ಲಿ ಯಾವ ಉತ್ತರವನ್ನು ಅಂದುಕೊಳ್ಳುತ್ತಿದ್ದಾನೊ ಅದೇ ಉತ್ತರ ಹಿಪ್ನಟೈಜ್ ಆದ ವ್ಯಕ್ತಿಯಿಂದ ಬರುತ್ತದೆ. ಇದೆಲ್ಲಾ ಹೇಗಿದೆಯೆಂದರೆ! ಮಿಮಿಕ್ರಿ ಮಾಡುವ ವ್ಯಕ್ತಿ, ಬಾಯಿ ಅಲುಗಾಡುವ ಒಂದು ಗೊಂಬೆಯನ್ನು ಎಲ್ಲರಿಗು ಕಾಣಿಸುವಂತೆ ತನ್ನ ಹತ್ತಿರ ಇಟ್ಟುಕೊಂಡು, ನೀನು ಏನು ತಿಂದಿದ್ದೀಯ ಎಂದು ಎಲ್ಲರಿಗು

ಕೇಳಿಸುವಂತೆ ಗೊಂಬೆಯನ್ನು ಪ್ರಶ್ನಿಸುವನು, ಆಗ ಆ ಗೊಂಬೆ ತನ್ನ ಬಾಯನ್ನು ಮೆಲುಕಾಡಿಸುತ್ತ ಬ್ರೆಡ್ ತಿಂದಿದ್ದೇನೆ ಎಂದು ಉತ್ತರ ಹೇಳಿತು. ಅಲ್ಲಿ ನೋಡುವವರಿಗೆ ಆತನು ಕೇಳಿದ ಪ್ರಶ್ನೆಗೆ ಗೊಂಬೆ ಉತ್ತರ ಹೇಳಿದೆಯೆಂದು ತಿಳಿದುಕೊಂಡರು. ಆದರೆ ವಾಸ್ತವಕ್ಕೆ ಯಾವನಾದರೆ ಪ್ರಶ್ನಿಸಿದ್ದಾನೊ, ಆ ಪ್ರಶ್ನೆಗೆ ಉತ್ತರವನ್ನು ಸಹ ಆತನೇ ಹೇಳಿದ್ದಾನೆ. ಆದರೆ ಆ ವಿಷಯ ಯಾರಿಗೂ ತಿಳಿಯದ ಹಾಗೆ ತಾನು ಬಾಯಿ ಮುಚ್ಚಿಕೊಂಡು ಉತ್ತರವನ್ನು ನಾವು ಕೇಳುವ ಹಾಗೆ ಹೇಳುವುದರಿಂದ ಬಾಯಿ ಅಲುಗಾಡಿಸುವ ಗೊಂಬೆಯೆ ಹೇಳಿದೆಯೆಂದು ಯಾರಾದರು ಅಂದುಕೊಳ್ಳಬಹುದು. ಮಿಮಿಕ್ರಿ ಆರ್ಟಿಸ್ಟ್ ಹತ್ತಿರ ಗೊಂಬೆ ಮಾತನಾಡುವುದು ಎಷ್ಟು ಸತ್ಯವೊ, ಹಿಪ್ನಟಿಸ್ಟ್ ಹತ್ತಿರ ಕಣ್ಣು ಮುಚ್ಚಿಕೊಂಡ ಮನುಷ್ಯ ಮಾತನಾಡುವುದು ಸಹ ಅಷ್ಟೇ ಸತ್ಯವಾಗುತ್ತದೆ.

ಈಗ ಸೂತ್ರ ತಿಳಿದುಹೋಗಿದೆ. ಅದರ ಪ್ರಕಾರ ಎಷ್ಟು ಲೆಕ್ಕಗಳಾದರು ಮಾಡಬಹುದೆನ್ನುವ ಹಾಗೆ ಮಿಮಿಕ್ರಿ ಆರ್ಟಿಸ್ಟ್ ಕೆಲಸವನ್ನು ಹೋಲಿಕೆಯಾಗಿ ತೆಗೆದುಕೊಂಡು ಹಿಪ್ನಟೈಜ್ ಮಾಡುವವರು ಇತರ ಮನುಷ್ಯನಿಂದ ಮಾತನಾಡಿ ಸುತ್ತಿದ್ದಾರೆ. ಮಿಮಿಕ್ರಿ ಕಲಾಕಾರನು ಮಾಡುವ ಕೆಲಸದಲ್ಲಿ ಪ್ರಶ್ನೆ ಉತ್ತರ ಮಿಮಿಕ್ರಿ ಮಾಡುವವನವೆ ಆಗಿರುವ ಹಾಗೆ, ಹಿಪ್ನಟೈಜ್ ಆಗಿರುವ ವರಲ್ಲಿಯು ಸಹ ಪ್ರಶ್ನೆ ಉತ್ತರ ಹಿಪ್ನಟೈಜ್ ಮಾಡುವವನವೆ ಆಗಿರುತ್ತವೆ. ಮಿಮಿಕ್ರಿ ಮಾಡುವವರ ಹತ್ತಿರ ಬಾಯಿ ಕದಲಿಸಿ ಮಾತನಾಡುವುದು ಬಟ್ಟೆಯಿಂದ ಮಾಡಿರುವ ಗೊಂಬೆಯಾಗಿರುವಾಗ, ಹಿಪ್ನಾಟಿಸ್ಟ್ ಹತ್ತಿರ ಮಾತನಾಡುವುದು ತೊಗಲಿನ ಗೊಂಬೆ. ಮಿಮಿಕ್ರಿ ಆರ್ಟಿಸ್ಟ್ ತನ್ನ ಪ್ರಶ್ನೆಯನ್ನು ಬಹಿರಂಗವಾಗಿ ಕೇಳಿ, ಉತ್ತರವನ್ನು ಮಾತ್ರ ಗೋಪ್ಯವಾಗಿ ಹೇಳಿದ ಹಾಗೆ ಒಬ್ಬ ಹಿಪ್ನಾಟಿಸ್ಟ್ ಸಹ ತನ್ನ ಪ್ರಶ್ನೆಯನ್ನು ಬಹಿರಂಗವಾಗಿ ಕೇಳಿ ಉತ್ತರವನ್ನು ಮಾತ್ರ ಗೋಪ್ಯವಾಗಿ ಕಣ್ಣು ಮುಚ್ಚಿಕೊಂಡಿರುವ ವ್ಯಕ್ತಿಯಿಂದ ಹೇಳಿಸುತ್ತಿದ್ದಾನೆ. ಎದುರು ವ್ಯಕ್ತಿ ಕಣ್ಣು ಮುಚ್ಚಿಕೊಂಡು ಮಾತನಾಡುವುದಕ್ಕೆ ಕಾರಣವೇನು ಎಂದು ಯಾರೂ ಯೋಚಿಸುವುದಿಲ್ಲ. ಅಷ್ಟೇ ಅಲ್ಲದೆ, ಪ್ರಶ್ನಿಸುವ ಮನುಷ್ಯನ ಮನೋಭಾವಕ್ಕೆ

ಸಂಬಂಧಿಸಿದ ಉತ್ತರಗಳು ಎದುರು ಮನುಷ್ಯನಲ್ಲಿ ಬರುವುದನ್ನು ಯಾರೂ ಗಮನಿಸುವುದಿಲ್ಲ. ಪ್ರಶ್ನೆಗಳು ಕೇಳುವ ವ್ಯಕ್ತಿ ದೊಡ್ಡ ಡಾಕ್ಟರು ಆಗಿರುವುದರಿಂದ ಮತ್ತು ಅವರು ಮಾಡುವ ಮೋಸಕ್ಕೆ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎಂದು ಹೆಸರು ಇಟ್ಟಿರುವುದರಿಂದ ಎಲ್ಲರೂ ಅದನ್ನು ನಂಬುತ್ತಿದ್ದಾರೆ.

ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಮಾಡುತ್ತಿದ್ದೇವೆಂದು ಹೇಳುತ್ತಿರುವ ಡಾಕ್ಟರುಗಳಿಗೆ ಯಾವ ಮಾತ್ರವು ಆತ್ಮಜ್ಞಾನ ಇಲ್ಲವಾದ್ದರಿಂದ, ಅವರ ಉತ್ತರಗಳನ್ನು ಅನುಸರಿಸಿ ನೋಡಿದರೆ ಅಜ್ಞಾನ ಹೊರಬೀಳುತ್ತದೆ. ಆತ್ಮ ಜ್ಞಾನವಿಲ್ಲದವರನ್ನು ಎಷ್ಟುಜನರನ್ನಾದರು ನಂಬುವಂತೆ ಮಾಡಬಹುದೇನೊ ಆದರೆ, ಆತ್ಮಜ್ಞಾನವಿರುವ ಯಾರನ್ನು, ಅವರು ತಮ್ಮ ಥೆರಪಿಯನ್ನು ತೋರಿಸಿ ನಂಬಿಸಲಾರರು. ಅದಕ್ಕೆ ಒಂದು ಉದಾಹರಣೆಯಾಗಿ ನಾವು ನೋಡಿದ ವಿಷಯವನ್ನು ಹೇಳುತ್ತೇವೆ ನೋಡಿರಿ. ಮಾ ಟಿ.ವಿಯಲ್ಲಿ ಪ್ರಸಾರವಾಗುವ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿಯನ್ನು ನೋಡಿದೆನು. ಒಬ್ಬ ಎಂ.ಡಿ. ಡಾಕ್ಟರು ಒಬ್ಬ ಮಹಿಳೆಯನ್ನು ಬೆಂಚಿನಮೇಲೆ ಮಲಗಲು ಹೇಳಿ ಆಕೆಯನ್ನು ನಾವು ನೋಡುತ್ತಿದ್ದಹಾಗೆ ಹಿಪ್ನಟೈಜ್ ಮಾಡಿದರು. ಆಗ ಆಕೆ ಅಪಸ್ಮಾರಕ ಸ್ಥಿತಿಯೊಳಗೆ ಹೊರಟು ಹೋಗಿದ್ದಾಳೆ. ಆದರೆ ಅಕೆಯ ಮನಸ್ಸು ಮಾತ್ರ ಆಕೆಯ ಶರೀರದಿಂದ ಮಾತನಾಡುತ್ತಿದೆ. ಆಗ ಆ ಡಾಕ್ಟರು ಪ್ರಶ್ನಿಸುತ್ತಿರುವುದು, ಉತ್ತರವನ್ನು ಕಣ್ಣು ಮುಚ್ಚಿಕೊಂಡ ಆ ಮಹಿಳೆ ಹೇಳುವುದು ಟಿ.ವಿಯಲ್ಲಿ ಕಾಣಿಸುತ್ತಿದೆ. ಆಕೆಯ ಉತ್ತರದಲ್ಲಿ ಗತಜನ್ಮದಲ್ಲಿ ಆಕೆ ಒಬ್ಬ ಲಂಬಾಣಿ ಮನೆಯಲ್ಲಿ ಜನ್ಮಿಸಿದ್ದೇನೆಂದು, ಮದುವೆಯಾದ ನಂತರ ಗಂಡ ಕುಡುಕನೆಂದು, ಆಕೆಯನ್ನು ಪ್ರತಿ ದಿನ ಹಿಂಸಿಸುತ್ತಿದ್ದನೆಂದು, ಒಂದು ದಿನ ಆಕೆ ಚಿಕ್ಕ ಶಿಶುವಾಗಿದ್ದ ಮಗ ಅಳುತ್ತಿದ್ದರೆ ಹಾಲು ಕೊಡುವುದಕ್ಕೆ ಹೋದಾಗ, ಹುಡುಗನಿಗೆ ಹಾಲು ಕೊಡದೆ ಆಕೆಯ ಗಂಡ ಕಾಮ ವಾಂಛ ತೀರಿಸಿಕೊಳ್ಳಲು ಎಳೆದುಕೊಂಡು ಹೋಗಿದ್ದಾನೆಂದು, ಅಂತಹ ಗಂಡನೊಂದಿಗೆ ಸಂಸಾರ ಮಾಡಲಾರದೆ ಮನೆ ಬಿಟ್ಟು ಓಡಿಹೋಗಿರುವುದೆಂದು, ಹಾಗೆ ಓಡಿಹೋದವಳು ಒಂದು ಮಾವಿನ ತೋಟದಲ್ಲಿ

ತಲೆ ಮರೆಸಿಕೊಂಡಿದ್ದಳೆಂದು ಹೇಳಿದಳು. ಡಾಕ್ಟರು ಕೇಳುವ ಪ್ರಶ್ನೆಗಳಿಗೆ ಆಕೆ ಉತ್ತರ ಹೇಳುತ್ತಿದ್ದಾಳೆ. ಅದರೆ ಆ ಕಥೆಯೆಲ್ಲಾ ಡಾಕ್ಟರು ಹುಟ್ಟಿಸಿರುವುದೆಂದು ಅರ್ಥವಾಗಿದೆ. ಚಿಕ್ಕ ಮಗು ಹಾಲು ಕುಡಿಯುವುದಕ್ಕೆ ಐದು ನಿಮಿಷಗಳು ಸಹ ಹಿಡಿಯುವುದಿಲ್ಲ. ಆ ಐದು ನಿಮಿಷಗಳು ಸಹ ತಾಳ್ಮೆಯಿಲ್ಲದ ಕಿರಾತಕ ತಂದೆ ಯಾರೂ ಇರುವುದಿಲ್ಲ. ಹೀಗೆ ಪ್ರಪಂಚದಲ್ಲಿ ನಡೆಯದ ವಿಷಯಗಳನ್ನು ಸಹ ಅಲ್ಲಿ ಹೇಳುವುದರಿಂದ ಅದೆಲ್ಲಾ ಕಟ್ಟು ಕಥೆಯೆಂದು ಅರ್ಥವಾಗಿಹೋಗಿದೆ. ಆ ಕಥೆಯಲ್ಲಿ ಕೊನೆಗೆ ಆಕೆ ಸಾಯುವ ಸಮಯಕ್ಕೆ ಆಕೆ ಮಗ ಮದುವೆಯಾಗದ ಯುವಕನಾಗಿ ಇದ್ದಾನಂತೆ. ನಂತರ ಆಕೆ ಸತ್ತುಹೋಗಿ ಇಲ್ಲಿ ಹುಟ್ಟಿ ಸುಮಾರು ಐವತ್ತು ವರ್ಷಗಳ ವಯಸ್ಸಿನಲ್ಲಿ ಇದ್ದಾಳೆ. ಆಕೆ ಗಂಡ ಸಹ ಅಲ್ಲೆ ಪಕ್ಕದಲ್ಲಿ ಕುಳಿತುಕೊಂಡು ಇದ್ದಾನೆ. ಆದರೆ ಆಕೆ ಹೇಳಿದ ಗತಜನ್ಮ ಕಥೆಯಲ್ಲಿ ಆಕೆ ಸತ್ತುಹೋದಾಗ ಯುವಕನಾಗಿದ್ದ ಆಕೆಯ ಮಗ ಪ್ರಸ್ತುತ ಜನ್ಮದಲ್ಲಿ ಆಕೆಗೆ ಗಂಡನಾಗಿ ಇದ್ದಾನೆಂದು ಹೇಳಿದ್ದಾಳೆ. ಈ ಮಾತು ಕೇಳುವುದಕ್ಕೆ ವಿಚಿತ್ರವಾಗಿ ಇರುವುದೆ ಅಲ್ಲದೆ ಪೂರ್ತಿ ಅಸತ್ಯವೆಂದು ಸಹ ತಿಳಿಯುತ್ತಿದೆ. ಏಕೆಂದರೆ! ಆಕೆ ಸತ್ತುಹೋದಾಗ ಆಕೆಯ ಮಗ ಯುವಕನಾಗಿ, ಆರೋಗ್ಯವಂತನಾಗಿ ಇದ್ದಾನೆ. ಪ್ರಸ್ತುತ ಜನ್ಮದಲ್ಲಿರುವ ಗಂಡ ಅಕೆಗಿಂತ ಸ್ವಲ್ಪ ದೊಡ್ಡವಯಸ್ಸಿನಲ್ಲಿ ಇದ್ದಾನೆ. ಆಕೆ ಸತ್ತುಹೋಗುವಾಗ ಬದುಕಿ ಇದ್ದ ಅಕೆ ಮಗ ಆಕೆಗಿಂತ ಮೊದಲು ಸತ್ತುಹೋಗಿಲ್ಲ ತಾನೆ! ಅಂತಹದರಲ್ಲಿ ಆಕೆಗಿಂತ ದೊಡ್ಡ ವಯಸ್ಸು ಗಂಡನಾಗಿ ಆಕೆ ಮಗ ಹೇಗೆ ಹುಟ್ಟುತ್ತಾನೆ? ಆಕೆಗಿಂತ ಮೊದಲು ಹುಟ್ಟುವುದಕ್ಕೆ ಅವಕಾಶವಿಲ್ಲದವನು, ಆಕೆಗಿಂತ ಹೆಚ್ಚಿನ ವಯಸ್ಸಿರುವ ಗಂಡನಾಗಿ ಹೇಗೆ ಇರುತ್ತಾನೆ? ಆತನು ಹೇಳಿಸಿರುವ ಮಾತು ಪೂರ್ತಿ ಅಸತ್ಯವೆಂದು ಚಿಕ್ಕ ಹುಡುಗನು ಸಹ ಹೇಳುತ್ತಾನೆ. ಇಂತಹ ಕಟ್ಟುಕಥೆಗಳಿಂದ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎನ್ನುವುದು ಪೂರ್ತಿ ಅಸತ್ಯವೆಂದು ತಿಳಿಯುತ್ತಿದೆ.

ಅದೇ ಡಾಕ್ಟರವರು ಮತ್ತೊಬ್ಬ ವ್ಯಕ್ತಿಯಿಂದ ಆತನ ಗತಜನ್ಮದ ಜ್ಞಾಪಕವನ್ನು ಹೇಳಿಸಿದಾಗ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎನ್ನುವ ಹೆಸರಿನಿಂದ

ಅಸತ್ಯವನ್ನು ಪ್ರಚಾರ ಮಾಡುತ್ತಾ ತಾನು ದೊಡ್ಡ ವಿಧಾನವನ್ನು ತಿಳಿದ ವ್ಯಕ್ತಿಯಾಗಿ ಪ್ರಚಾರವಾಗಿ ಹೋಗುತ್ತಿದ್ದಾನೆಂದು ಅರ್ಥವಾಗುತ್ತಿದೆ. ಅಂತಹ ಸಂಘಟನೆ ಇನ್ನೊಂದು ಇದೆ ನೋಡಿರಿ. ಒಬ್ಬ ಸಿನಿಮಾ ನಟನಿಂದ ಗತಜನ್ಮ ವಿವರಗಳನ್ನು ಹೇಳಿಸುವ ಸಮಯದಲ್ಲಿ ಪ್ರಶ್ನಿಸುವ ಡಾಕ್ಟರು, ಉತ್ತರ ಹೇಳುವ ಸಿನಿಮಾ ನಟನನ್ನು ಕೆಲವು ಪ್ರಶ್ನೆಗಳನ್ನು ಕೇಳುತ್ತಾ ಕೊನೆಗೆ ಒಂದು ಪ್ರಶ್ನೆ ಕೇಳಿದನು. ಆ ಪ್ರಶ್ನೆ ಸರ್ವಸಾಧಾರಣವಾಗಿ ಇದ್ದರೂ ಉತ್ತರ ಮಾತ್ರ ಪೂರ್ತಿ ಅಸತ್ಯವಾದದ್ದೆಂದು ಯಾರಿಗಾದರೂ ಅರ್ಥವಾಗಬಹುದು. ಆ ಉತ್ತರದಲ್ಲಿ ಆ ಸಿನಿನಟನು ಗತ ಜನ್ಮದಲ್ಲಿ ಕ್ರೈಸ್ತ ಪ್ರವಕ್ತನಾದ ಯೇಸು ಪ್ರಭುವಾಗಿ ಇದ್ದೇನೆಂದು ಹೇಳಿದ್ದಾನೆ. ಆ ಮಾತನ್ನು ಸಾಧಾರಣವಾದ ಮನುಷ್ಯರು ನಂಬಬಹುದೇನೊ ನಮಗೆ ಮಾತ್ರ ಅದು ಅಸತ್ಯವಾದ ಮಾತು ಎಂದು ಪ್ರತ್ಯಕ್ಷವಾಗಿ ತಿಳಿದು ಹೋಗಿದೆ. ಯೇಸು ಪ್ರಭುವು ಒಂದು ಮತಕ್ಕೆ ಪ್ರವಕ್ತನಾಗಿದ್ದು ಎಷ್ಟೋ ಜ್ಞಾನವನ್ನು ಬೋಧಿಸಿದ್ದಾನೆ. ಅಂಥವನು ಮತ್ತೆ ಹುಟ್ಟಿದರೆ ಆತನಲ್ಲಿ ಪೂರ್ತಿಜ್ಞಾನ ಕಾಣಿಸುತ್ತದೆ. ಆದರೆ ದೈವಧರ್ಮಗಳು ಎಂದರೆ ಏನೊ ತಿಳಿಯದ ವ್ಯಕ್ತಿ ತಾನು ಯೇಸು ಪ್ರಭುವೆಂದು ಹೇಳಿಕೊಳ್ಳುವುದು ಹೇಗಿದೆಯೆಂದರೆ ಮಾಂಸ ತಿನ್ನುವ ಹುಲಿ ನಾನು ಹುಲ್ಲು ತಿನ್ನುವ ಆಕಳೆಂದು ಹೇಳಿಕೊಂಡಹಾಗಿದೆ. ಪ್ರಭು ಎಲ್ಲರ ಹಾಗೆ ಜನ್ಮಕ್ಕೆ ಬರುವವನಲ್ಲ. ಒಂದು ವೇಳೆ ಬಂದರೆ ಭೂಮಿ ಮೇಲೆ ಜ್ಞಾನವನ್ನು ಬೋಧಿಸಲು ಬರುತ್ತಾನೆ ಆದರೆ, ಹೊಟ್ಟೆ ಪಾಡಿಗಾಗಿ ಸಿನಿಮಾಗಳಲ್ಲಿ ನಟಿಸುವುದಕ್ಕೆ ಬರುವುದಿಲ್ಲ. ಸಿನಿಮಾಗಳಲ್ಲಿ ನಟಿಸುವ ವ್ಯಕ್ತಿಯಿಂದ ಯೇಸು ಪ್ರಭುವಿನ ದೊಡ್ಡತನ ತಿಳಿಯದ ಡಾಕ್ಟರು ತಾನು ಯೇಸು ಪ್ರಭುವೆಂದು ತನ್ನ ಮಾತನ್ನು ಸಿನಿಮಾ ನಟನಿಂದ ಹೇಳಿಸುವುದು ಬಹಳ ತಪ್ಪು. ಅದರಿಂದ ಆತನ ಮಾತು ಸುಳ್ಳೆಂದು ತಿಳಿಯುವುದೆ ಅಲ್ಲದೆ, ಆತನು ಯಾವ ಮಾತ್ರವು ದೈವ ಸೂತ್ರಗಳು ತಿಳಿಯದ ವ್ಯಕ್ತಿ ಎಂದು ಸಹ ತಿಳಿದುಹೋಗಿದೆ.

ಇಂತಹುದೆ ನನಗೆ ತಿಳಿದ ಪೂರ್ತಿ ಅಸತ್ಯವು ಮತ್ತೊಂದು ಹಿಪ್ನಟೈಜ್ ಮಾಡುವ ಡಾಕ್ಟರರಿಂದ ಹೊರಬಿದ್ದಿದೆ. ಪ್ರಶ್ನಿಸುವವನೆ ಉತ್ತರವನ್ನು

ಹೇಳಿಸುತ್ತಿದ್ದನು. ಆದರೆ ತನಗೆ ತಿಳಿದಿದ್ದನ್ನೇ ಹಿಪ್ನಟೈಜ್ ಆದ ವ್ಯಕ್ತಿಯಿಂದ ಹೇಳಿಸುವುದು ನಡೆಯುತ್ತಿದೆ. ಹಾಗಿರುವಾಗ ಹೇಳಿಸುವವರ ನಿಜ ಸ್ವರೂಪ ಹೊರಬೀಳುತ್ತದೆ. ಹೇಳುವವನು ಹೇಳಿದ ಮಾತುಗಳೆಲ್ಲ ಕೇಳುವವನವೆ ಎಂದು ತಿಳಿಯದೆ ಹೋಗುವುದರಿಂದ ಪ್ರತಿಯೊಬ್ಬರೂ ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎನ್ನುವುದರಲ್ಲಿ ಏನೂ ತಿಳಿಯದೆ ಹೋಗುತ್ತಿದ್ದಾರೆ. ಈಗ ನನಗೆ ಅಸತ್ಯವಾಗಿ ತೋಚಿದ ಮಾತು ಎಲ್ಲರಿಗೂ ಸತ್ಯವಾಗಿ ಒಪ್ಪಿಕೊಳ್ಳುವ ವಿಷಯವನ್ನು ನೋಡೋಣ. ಇದರಲ್ಲಿ ಆ ಡಾಕ್ಟರ್‌ರವರ ಮಾತು ಅಸತ್ಯವಾಗಿ ಕಾಣಿಸದು ಆದರೆ, ನನ್ನ ಮಾತೆ ಅಸತ್ಯವಾಗಿ ಕಾಣಿಸುವುದು. ಅಂತಹುದು ಏನೆಂದರೆ! ಸರ್ವಸಾಧಾರಣವಾಗಿ ಪ್ರಜೆಗಳೆಲ್ಲರೂ ಒಂದು ಅಸತ್ಯವನ್ನು ಸತ್ಯವೆಂದು ನಂಬುತ್ತಿದ್ದಾರೆ. ಮೇಧಾವಿಗಳೂ, ವಿಜ್ಞಾನಿಗಳು, ಭೌತಿಕ ಶಾಸ್ತ್ರಜ್ಞರೆಂದು ಕರೆಸಿಕೊಳ್ಳುವವರೂ ಎಲ್ಲರೂ ಒಂದು ಜನ್ಮ ವಿಷಯದಲ್ಲಿ ಇರುವ ಸತ್ಯವನ್ನು ಗಮನಿಸದೆ, ಇಲ್ಲದ ಅಸತ್ಯವನ್ನು ಸತ್ಯವೆಂದುಕೊಳ್ಳುವುದು ನಡೆಯುತ್ತದೆ. ಮನುಷ್ಯ ಜನ್ಮಿಸುವ ಕ್ಷಣಗಳಲ್ಲಿ ಏನು ನಡೆಯುತ್ತಿದೆಯೊ ತಿಳಿಯದೆ ತಪ್ಪಾಗಿ ಅಸತ್ಯವನ್ನು ಸತ್ಯವಾಗಿ ನಂಬುವುದು ನಡೆಯುತ್ತದೆ. ಜನನ ಸಮಯ ವಿಷಯದಲ್ಲಿ ಮಾತ್ರ ಒಂದು ವಿಧದಲ್ಲಿ ಎಲ್ಲರೂ ಕೆಸರಿನಲ್ಲಿ ಕಾಲು ಹಾಕಿದ್ದಾರೆಂದು ಹೇಳಬಹುದು. ಎಲ್ಲರೂ ಗರ್ಭಸ್ಥ ಶಿಶುವಿಗೆ ಪ್ರಾಣವಿದೆಯೆಂದು ತಿಳಿದುಕೊಳ್ಳುವುದು ನಡೆಯುತ್ತದೆ. ಆದರೆ ಗರ್ಭಸ್ಥ ಶಿಶುವಿಗೆ ಪ್ರಾಣ ಇಲ್ಲವೆಂಬ ಮಾತು ಸತ್ಯವೆನ್ನುವ ವಿಷಯ ಬಹುಶಃ ಯಾರಿಗೂ ತಿಳಿಯದು. ಇದೇ ವಿಷಯವನ್ನೇ ನಾವು "ಜನನ ಮರಣ ಸಿದ್ಧಾಂತ" ಎನ್ನುವ ಗ್ರಂಥದಲ್ಲಿ ಶಾಸ್ತ್ರಬದ್ಧವಾದ ನಿರೂಪಣೆಗಳಿಂದ ಸಿದ್ಧೀಕರಿಸಿ ಬರೆಯಲಾಗಿದೆ.

ಮನುಷ್ಯನ ಜನನದಲ್ಲಿ ಏನು ನಡೆಯುತ್ತಿದೆಯೊ ಪ್ರತ್ಯಕ್ಷವಾಗಿ ತಿಳಿದರೂ ಅದರಲ್ಲಿನ ಸತ್ಯ ಕಾಣಿಸುತ್ತಿದ್ದರು, ತಾಯಿ ಗರ್ಭದಲ್ಲಿಯೆ ಐದನೆ ತಿಂಗಳಲ್ಲಿ ಪ್ರಾಣ ಬರುತ್ತದೆನ್ನುವ ಆಧ್ಯಾತ್ಮಿಕ ವಾದಿಗಳು ಕೆಲವರು ಹೇಳುತ್ತಿದ್ದರೂ, ವಿಜ್ಞಾನ ತಿಳಿದವರು ಕೆಲವರು ವೀರ್ಯ ಕಣದಲ್ಲಿಯೆ ಪ್ರಾಣವಿದೆಯೆಂದು, ತಾಯಿ

ಗರ್ಭ ಧರಿಸಿದಾಗಿನಿಂದ ಶಿಶುವಿಗೆ ಪ್ರಾಣವಿದೆಯೆಂದು ಹೇಳುತ್ತಿದ್ದಾರೆ. ಈ ವಿಧದಲ್ಲಿ ವಿಜ್ಞಾನಿಗಳು, ಜ್ಞಾನಿಗಳು ತಪ್ಪಾಗಿ ತಿಳಿದಿರುವುದರಿಂದ ಮನುಷ್ಯನ ಜನನ ಸಮಯ ಜಗ ತಿಳಿದ ಸತ್ಯವೆಂದು, ಈ ವಿಷಯದಲ್ಲಿ ಎಲ್ಲರೂ ಅಸತ್ಯವನ್ನೇ ಸತ್ಯವೆಂದುಕೊಳ್ಳುವುದು ನಡೆಯುತ್ತದೆಂದು ನಾವು ಜನನ ಸಿದ್ಧಾಂತದಲ್ಲಿ ತಿಳಿಸಿದ್ದೇವೆ. ಆ ವಿಷಯದಲ್ಲಿ ಎಲ್ಲರೂ ಹೇಗೆ ತಪ್ಪಾಗಿ ತಿಳಿದಿದ್ದಾರೊ ವಿಶದವಾಗಿ ತಿಳಿಸಿದ್ದೇವೆ. ನಾವು ಹೇಳುತ್ತಿರುವ ಮಾತು ಸರಿಯಾದದ್ದೆಂದು ಎಲ್ಲರಿಗು ತಿಳಿಯುವುದಕ್ಕೆ ಶಾಸ್ತ್ರಬದ್ಧವಾದ ನಿರೂಪಣೆಗಳನ್ನು ತೋರಿಸಿದ್ದೇವೆ. ಇದೇ ಜನನ ವಿಷಯವನ್ನು ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ ಎನ್ನುವುದರ ಪ್ರಕಾರ ಹಿಪ್ನಟೈಜ್ ಮಾಡಿಸಿಕೊಂಡಿರುವ ವ್ಯಕ್ತಿಯಿಂದ ಹಿಪ್ನಟೈಜ್ ಮಾಡಿದ ವ್ಯಕ್ತಿ ಹೇಳಿಸುವಾಗ ಹೇಳುವ ಮನುಷ್ಯ, ಇರುವ ಸತ್ಯವನ್ನು ಹೇಳದೆ ಅಸತ್ಯವನ್ನು ಹೇಳುತ್ತಿದ್ದಾನೆಂದರೆ ಅದು ಹೇಳಿಸುವ ವ್ಯಕ್ತಿಯ ಲೋಪವೆಂದು, ಆತನಿಗೆ ಸತ್ಯ ತಿಳಿಯದೆ ಹೋಗುವುದರಿಂದ ಹಾಗೆ ಹೇಳಿಸುತ್ತಾನೆಂದು ತಿಳಿದುಹೋಗುತ್ತದೆ. ಪಾಸ್ಟ್‌ಲೈಫ್ (ಹಿಂದಿನ ಜನ್ಮ)ದಲ್ಲಿ ಏನು ನಡೆದಿದೆಯೆಂದು, ಆ ಮನುಷ್ಯನ ಆತ್ಮಕ್ಕೆ ಮಾತ್ರ ತಿಳಿದಿರುತ್ತದೆ ಆದರೆ, ಪ್ರಸ್ತುತ ಜನ್ಮದಲ್ಲಿರುವ ಮನಸ್ಸಿಗೆ ತಿಳಿಯದೆಂದು ಹೇಳಿಕೊಂಡಿದ್ದೇವೆ. ಆತ್ಮ ಗತಜನ್ಮದಲ್ಲಿಯು ಸಹ ಜೀವಾತ್ಮನ ಹಿಂದೆ ಇದೆ, ಮನಸ್ಸು ಗತಜನ್ಮದಲ್ಲಿ ಇಲ್ಲ. ಆದರೆ ಗತಜನ್ಮ ವಿಷಯವಾಗಲಿ, ಗತಜನ್ಮದಲ್ಲಿ ಸತ್ತುಹೋದ ಸಮಯದಲ್ಲಿನ ವಿಷಯವಾಗಲಿ, ಹಾಗೆ ಪ್ರಸ್ತುತ ಜನ್ಮದಲ್ಲಿ ಹುಟ್ಟಿದ ಸಮಯದಲ್ಲಿ ನಡೆದ ವಿಷಯವಾಗಲಿ, ಎಲ್ಲವನ್ನು ಆತ್ಮ ಹೇಳುತ್ತದೆ. ಆತ್ಮ ಯಾರ ಮಾತು ಕೇಳುವುದಿಲ್ಲ, ಆದ್ದರಿಂದ ಯಾರ ಮಾತಿಗು ಉತ್ತರವನ್ನು ಹೇಳುವುದಿಲ್ಲ. ಎದುರುಗಡೆ ಮನುಷ್ಯನ ಪ್ರಶ್ನೆಗೆ ಹಿಪ್ನಟೈಜ್ ಆದ ಮನುಷ್ಯನಲ್ಲಿನ ಮನಸ್ಸು ಮಾತ್ರ ಉತ್ತರ ಹೇಳುವುದು. ಆ ಮನಸ್ಸಿಗೆ ಹಿಂದಿನ ಜನ್ಮದ ವಿಷಯಗಳು ತಿಳಿಯದೆ ಹೋಗುವುದರಿಂದ, ಹಾಗೆ ಜನನ ಸಮಯದಲ್ಲಿ ಜ್ಞಾಪಕ ಇಲ್ಲವಾದ್ದರಿಂದ, ಆ ವಿಷಯಗಳನ್ನು ಮನಸ್ಸು ಹೇಳುವುದಿಲ್ಲ. ಹಾಗಿದ್ದಲ್ಲಿ ಎದುರು ಮನುಷ್ಯ ಹೇಳಿಕೊಟ್ಟಹಾಗೆ ಏನು ಹೇಳಿದರೆ ಅದನ್ನೇ ಹೇಳುತ್ತದೆ.

ಒಂದು ದಿನ ಹಿಪ್ನಟೈಜ್ ಮಾಡಿದ ವ್ಯಕ್ತಿ, ಹಿಪ್ನಟೈಜ್ ಆದ ವ್ಯಕ್ತಿಯನ್ನು ಕೆಲವು ಪ್ರಶ್ನೆಗಳು ಕೇಳುತ್ತಾ ಒಂದು ಸಮಯದಲ್ಲಿ "ನೀನು ತಾಯಿ ಗರ್ಭದಲ್ಲಿದ್ದಾಗ ಐದನೆ ತಿಂಗಳಲ್ಲಿ ಏನು ಮಾಡಿದೆ? ಹೇಗಿರುತ್ತಿತ್ತು? ಎಂದು ಕೇಳಿದನು. ಆಗ ಕಣ್ಣು ಮುಚ್ಚಿಕೊಂಡು ಮಲಗಿಕೊಂಡಿದ್ದ ವ್ಯಕ್ತಿ ತಾನು ತಾಯಿಗರ್ಭದಲ್ಲಿ ಬಹಳ ಕಷ್ಟ ಪಟ್ಟಂತೆ, ಆಗ ಗತಜನ್ಮದಲ್ಲಿನ ಕೆಲವು ವಿಷಯಗಳು ಜ್ಞಾಪಕಕ್ಕೆ ಬಂದಂತೆ, ಮುಂಬರುವ ಜನ್ಮದಲ್ಲಿ ಹೇಗೆ ಇರಬೇಕೊ ಮೊದಲೆ ನಿರ್ಣಯಿಸಿಕೊಂಡಹಾಗೆ ಹೇಳಿದನು. ಹಾಗೆ ಹೇಳುವುದು ನಮಗೆ ಒಂದು ವಿಧದಲ್ಲಿ ಆಶ್ಚರ್ಯವಾದರೂ ಅದು ಹೇಳುವ ಮನುಷ್ಯನ ಮಾತು ಅಲ್ಲವೆಂದು, ಕೇಳುವ ಮನುಷ್ಯನ ಮಾತೇ ಎಂದು ಅರ್ಥವಾಗಿಹೋಗಿದೆ. ಏಕೆಂದರೆ! ಹೇಳುವ ಮನುಷ್ಯನಿಗೆ ಗರ್ಭಸ್ಥ ಜೀವನ ಅಸಲಿಗೆ ಇಲ್ಲ. ಇಲ್ಲದ್ದನ್ನು ಇದೆಯೆಂದು ಆ ಮನುಷ್ಯ ಹೇಗೆ ಹೇಳುತ್ತಾನೆ? ಆದ್ದರಿಂದ ಇಲ್ಲದ್ದನ್ನು ಹೇಳಿಸುವುದು ನಡೆಯುತ್ತದೆಂದು, ಅದರಲ್ಲಿನ ಅಸತ್ಯವು, ಹೇಳಿಸುವ ಮನುಷ್ಯನದ್ದೆ ಎಂದು ಅರ್ಥವಾಗುತ್ತಿದೆ, ಗರ್ಭಸ್ಥ ಜೀವನ ವಿಷಯದಲ್ಲಿ ಎಲ್ಲರೂ ತಪ್ಪಾಗಿ ತಿಳಿದಂತೆ ಹಿಪ್ನಟೈಜ್ ಮಾಡಿದ ವ್ಯಕ್ತಿ ಸಹ ತಪ್ಪಾಗಿ ತಿಳಿದಿರುವುದರಿಂದ ಆತನ ಉದ್ದೇಶವನ್ನೇ ಎದುರುಗಡೆ ಮನುಷ್ಯನಿಂದ ಹೇಳಿಸಿದ್ದಾನೆಂದು ತಿಳಿದುಹೋಗಿದೆ. ಇಲ್ಲಿ ಕೆಲವರು ಪ್ರಶ್ನೆಗಳು ಕೇಳುವುದಕ್ಕೆ ಅವಕಾಶವಿದೆ. ಅದೇನೆಂದರೆ! ಹಾಗೆ ಏಕೆ ಹೇಳಿಸುತ್ತಿದ್ದಾರೆ? ಹಾಗೆ ಹೇಳಿಸುವುದರಿಂದ ಅವರಿಗೇನು ಲಾಭ? ಎಂದು ಕೆಲವರು ಪ್ರಶ್ನಿಸಬಹುದು. ಅದಕ್ಕೆ ನಮ್ಮ ಉತ್ತರವೇನೆಂದರೆ!

ಈ ವಿಧವಾಗಿ "ಪಾಸ್ಟ್‌ಲೈಫ್ ರಿಗ್ರೇಷನ್ ಥೆರಪಿ" ಎಂದು ವೈದ್ಯ ವೃತ್ತಿಯಲ್ಲಿರುವ ಡಾಕ್ಟರ್‌ಗಳು ಮಾತ್ರ ಮಾಡುವುದು ಗಮನಿಸಬೇಕಾದ ವಿಷಯ. ಹಾಗೆ ಮಾಡುವುದು ಪ್ರಸ್ತುತ ಜನ್ಮದಲ್ಲಿನ ರೋಗಕ್ಕೆ ಹಿಂದಿನ ಜನ್ಮದಲ್ಲಿನ ಯಾವುದೊ ಒಂದು ಕಾರಣವನ್ನು ಹೇಳಿಸಿ, ಅದರಿಂದ ಈ ರೋಗ ಬಂದಿದೆಯೆಂದು ನಂಬಿಸಿ, ಹಿಂದಿನ ಜನ್ಮದಲ್ಲಿನ ಕಾರಣಕ್ಕೆ ತಕ್ಕಂತೆ ಚಿಕಿತ್ಸೆ ಮಾಡಿದರೆ ಆ ರೋಗ ಹೋಗುತ್ತದೆಂದು ಹೇಳಿ, ಹಾಗೆ ಹಿಂದಿನ ಕಾರಣವನ್ನು

ತಿಳಿದುಕೊಂಡು ಚಿಕಿತ್ಸೆ ಮಾಡುವುದು ಎಲ್ಲರ ವೈದ್ಯರಿಂದ ಆಗುವುದಿಲ್ಲವೆಂದು, ತಾವು ಮಾತ್ರ ಹಾಗೆ ಮಾಡುತ್ತಿದ್ದೇವೆಂದು ಪ್ರಚಾರಮಾಡುತ್ತಿದ್ದಾರೆ. ಅಷ್ಟೇ ಅಲ್ಲದೆ ಹಾಗೆ ಹಿಂದಿನ ಜನ್ಮದಲ್ಲಿನ ಕಾರಣಗಳನ್ನು ತಿಳಿಯದೆ ಚಿಕಿತ್ಸೆ ಮಾಡಿದರು ಆ ರೋಗಗಳು ಹೋಗುವುದಿಲ್ಲವೆಂದು, ಅವು ದೀರ್ಘಕಾಲ ರೋಗಗಳಾಗಿ ಇರುತ್ತವೆಂದು ಹೇಳುತ್ತಿದ್ದಾರೆ. ಹಾಗೆ ಹೇಳುವುದರಿಂದ ಬಹಳ ಜನರು ಆ ಡಾಕ್ಟರನ್ನು ಪ್ರತ್ಯೇಕ ವೈದ್ಯನಾಗಿ ಗುರುತಿಸುವುದೆ ಅಲ್ಲದೆ, ಪ್ರತಿ ಒಬ್ಬರೂ ತಮ್ಮ ಹಿಂದಿನ ಜನ್ಮ ಎಂತಹುದೊ ಸ್ವಲ್ಪವಾದರೂ ತಿಳಿದುಕೊಳ್ಳಬೇಕೆಂದು ಅಭಿಲಾಷೆ ಹೊಂದಿ, ಅಂತಹ ಡಾಕ್ಟರುಗಳನ್ನೇ ಆಶ್ರಯಿಸುವುದು ನಡೆಯುತ್ತದೆ. ಅದರಿಂದ "ಪಾಸ್ಟ್‌ಲೈಫ್ ಥೆರಪಿ" ಎಂದು ಹೆಸರು ಇಟ್ಟುಕೊಂಡ ಡಾಕ್ಟರುಗಳಿಗೆ ಬೆಲೆ ಬೆಳೆದು ಹೋಗುತ್ತದೆ. ಕೆಲವರು ಡಾಕ್ಟರುಗಳು ಮಾತ್ರ ಈ ವಿಧಾನವನ್ನು ಪ್ರಚಾರ ಮಾಡಿಕೊಳ್ಳುವುದು ನಾವು ಗಮನಿಸಬಹುದು. ಈ ವಿಧಾನವು ಸರಿಯಾದದ್ದಲ್ಲವೆಂದು ಕೆಲವರು ಸೈನ್ಸ್ ತಿಳಿದ ವಿಜ್ಞಾನಿಗಳು, ಹೇತುವಾದಿಗಳು ಹೇಳುವುದು ನಡೆಯುತ್ತಿದೆ. ನಾವು ಸತ್ಯವನ್ನು ಸತ್ಯವಾಗಿ, ಅಸತ್ಯವನ್ನು ಅಸತ್ಯವಾಗಿ ಹೇಳುತ್ತಿದ್ದೇವೆ. ಈ ವಿಷಯದಲ್ಲಿ ನಾವೂ ಸಹ ಹೇತುವಾದಿಗಳೊಂದಿಗೆ ಏಕೀಭವಿಸುತ್ತಿದ್ದೇವೆ. ಹಾಗೆಂದು ಎಲ್ಲವನ್ನು ಒಂದೇ ಗೂಟಕ್ಕೆ ಕಟ್ಟಿಹಾಕಿ ಇಂದಿನ ಹೇತುವಾದಿಗಳೊಂದಿಗೆ ಎಲ್ಲ ವಿಷಯಗಳಲ್ಲಿಯು ಏಕೀಭವಿಸುವುದಿಲ್ಲ.

ಸೃಷ್ಠಿಯಲ್ಲಿ ತಯಾರಾದ ಮನುಷ್ಯ ಆಗಿನಿಂದ ಸಾಯುತ್ತಾ ಹುಟ್ಟುತ್ತಾ ಶರೀರಗಳನ್ನು ಬದಲಾಯಿಸಿಕೊಳ್ಳುತ್ತಿದ್ದಾನೆ. ಮರಣದಲ್ಲಿ ಶರೀರ ನಶಿಸಿದರೂ ಜೀವಾತ್ಮನು ಮಾತ್ರ ನಶಿಸದೆ ಹೊಸ ದೇಹವನ್ನು ಧರಿಸುತ್ತಿದ್ದಾನೆ. ಜೀವಾತ್ಮ ಸೃಷ್ಠಿ ಆದಿಯಿಂದ ಶರೀರವನ್ನು ಧರಿಸುತ್ತಾ ಪಾಪ ಪುಣ್ಯಗಳನ್ನು ಅನುಭವಿಸುತ್ತಾ ಇಲ್ಲಿಯವರೆಗು ಮುಂದುವರೆಯುತ್ತಿದ್ದಾನೆಂದು, ಯಾವಾಗಾದರೆ ದೈವಜ್ಞಾನವನ್ನು ತಿಳಿದುಕೊಂಡು ಕರ್ಮಗಳನ್ನು ಇಲ್ಲದ ಹಾಗೆ ಮಾಡಿಕೊಳ್ಳುತ್ತಾನೊ ಆ ದಿನ ದೈವದೊಳಗೆ ಸೇರಿಹೋಗಿ ನಂತರ ಹುಟ್ಟದೆ ಹೋಗುವನೆಂದು ಬ್ರಹ್ಮ ವಿದ್ಯಾಶಾಸ್ತ್ರ ಹೇಳುತ್ತಿದೆ. ಆರು ಶಾಸ್ತ್ರಗಳಲ್ಲಿ ದೊಡ್ಡದಾದ ದೈವಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರ

ಪ್ರತಿ ಮನುಷ್ಯನಿಗೆ ಅನ್ವಯಿಸುವುದಾಗಿ ಇದೆ. ಸ್ವತಃವಾಗಿ ದೇವರು ತಿಳಿಸಿರುವುದು ಬ್ರಹ್ಮವಿದ್ಯಾಶಾಸ್ತ್ರವಾದುದರಿಂದ, ಅದು ಸರ್ವ ಮಾನವರಿಗೂ ಅನ್ವಯಿಸುತ್ತದೆ. ಅದು ದೈವಶಾಸ್ತ್ರವಾದುದರಿಂದ ಅದಕ್ಕೆ ಕುಲ, ಮತ ಎನ್ನುವ ವ್ಯತ್ಯಾಸಗಳಿರುವುದಿಲ್ಲ. ಮೂರು ಭಾಗಗಳ ಕಣ್ಣು, ಏಳು ಭಾಗಗಳ ಹಸ್ತವು ಇರುವ ಮಾನವರೆಲ್ಲರಿಗು ಅನ್ವಯಿಸುವುದು. ದೇವರು ತನ್ನ ಜ್ಞಾನವನ್ನು ತಿಳಿಸುವ ನಿಮಿತ್ತ ತನ್ನ ಬೋಧಕ (ಪ್ರವಕ್ತ)ರನ್ನು ಕಳುಹಿಸಿದರೆ, ಅವರು ಹೇಳಿದ ಜ್ಞಾನವನ್ನು ಮನುಷ್ಯ ಸರಿಯಾಗಿ ಅರ್ಥಮಾಡಿಕೊಳ್ಳದೆ ಪ್ರವಕ್ತರ ಬೋಧನೆಗಳಿಗೆ ಮತ ಎನ್ನುವ ಹೆಸರನ್ನು ತಗುಲಿಸಿಕೊಂಡಿದ್ದಾರೆ. ವಾಸ್ತವಕ್ಕೆ ಯಾವ ಪ್ರವಕ್ತ ಮತ ಬೋಧನೆಗಳನ್ನು ಹೇಳಲಿಲ್ಲ, ಅವರು ಸರ್ವ ಮಾನವರಿಗೂ ಅನ್ವಯಿಸುವ ದೈವ ಸೂತ್ರಗಳನ್ನೇ ಹೇಳಿದ್ದಾರೆ. ಪ್ರವಕ್ತರು ಬೋಧಿಸಿದ ದೈವ ಸೂತ್ರಗಳನ್ನು ಮನುಷ್ಯ ಅರ್ಥ ಮಾಡಿಕೊಳ್ಳದೆ ಮಾಯೆ ಪ್ರಭಾವದಿಂದ ಮತಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ಶಾಸ್ತ್ರವು ಶಾಸನ ರೂಪವಾಗಿದೆಯೆಂದು ತಿಳಿಯದೆ ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಹೇಳಿದ ಸೂತ್ರಗಳಿಗೆ ವಿರುದ್ಧವಾಗಿ ಕೆಲವು ಮಾತುಗಳನ್ನು ಮನುಷ್ಯ ಸೃಷ್ಟಿಸಿಕೊಂಡಿದ್ದಾನೆ. ಅಂತಹುಗಳಲ್ಲಿ ಪುನರ್ಜನ್ಮಗಳು ಇಲ್ಲ ಎಂದು ಹೇಳುವುದು ಬ್ರಹ್ಮವಿದ್ಯಾಶಾಸ್ತ್ರಕ್ಕೆ ವಿರುದ್ಧವಾದ ಮಾತು. ಆರನೇ ಶಾಸ್ತ್ರವಾದ ಬ್ರಹ್ಮವಿದ್ಯಾಶಾಸ್ತ್ರದಲ್ಲಿ ಇರುವ ಧರ್ಮಕ್ಕೆ ವಿರುದ್ಧವಾದ ಮಾತನ್ನು ಹೇಳಿಕೊಳ್ಳುವುದು ಅಜ್ಞಾನವಾಗುತ್ತದೆ. ಅಷ್ಟೇ ಅಲ್ಲದೆ ದೈವ ಧರ್ಮಕ್ಕೆ ವಿರುದ್ಧವಾದದ್ದು ಅಧರ್ಮವಾಗುತ್ತದೆ.

ಇಲ್ಲಿಗೆ ಎರಡು ಸಾವಿರ ವರ್ಷಗಳ ಪೂರ್ವದಲ್ಲಿ ಹುಟ್ಟಿದ ಕ್ರೈಸ್ತದಲ್ಲಿ ಪ್ರವಕ್ತನಾದ ಯೇಸು ಪ್ರಭುವು ಪುನರ್ಜನ್ಮ ಇಲ್ಲವೆಂದು ಹೇಳದಿದ್ದರೂ, ಅಲ್ಲಲ್ಲಿ ಪುನರ್ಜನ್ಮಗಳಿವೆಯೆಂದು ಅರ್ಥವಾಗುವ ಹಾಗೆ ಹೇಳಿದ್ದರೂ ಅರ್ಥ ಮಾಡಿಕೊಳ್ಳದ ಮನುಷ್ಯ, ಪ್ರಭು ಹೇಳಿರುವುದನ್ನು ಒಂದು ಮತವಾಗಿ ಏರ್ಪಡಿಸಿಕೊಂಡಿರುವುದೆ ಅಲ್ಲದೆ, ಪುನರ್ಜನ್ಮಗಳು ತಮ್ಮ ಮತದಲ್ಲಿ ಹೇಳಲಿಲ್ಲವೆಂದು ಪ್ರಚಾರ ಮಾಡಿಕೊಂಡಿದ್ದಾನೆ. ಆ ವಿಧದಲ್ಲಿ ಕ್ರೈಸ್ತ ಮತದಲ್ಲಿ

ಯೇಸು ಮಾತನ್ನು ಆ ಮತದವರೆಲ್ಲರೂ ವಕ್ರೀಕರಿಸಿಕೊಂಡು ಹೇಳಿಕೊಂಡಿದ್ದಾರೆ. ನಂತರ ಸ್ವಲ್ಪ ಕಾಲಕ್ಕೆ ಅಂದರೆ ಸುಮಾರು 14 ನೂರು ವರ್ಷಗಳ ಪೂರ್ವವು ಮುಹಮ್ಮದ್ ಪ್ರವಕ್ತರವರು ಹುಟ್ಟಿ ತನಗೆ ತಿಳಿದ ದೈವ ಸಂದೇಶವನ್ನು ಪ್ರಜೆಗಳಿಗೆ ತಿಳಿಸಿದ್ದಾನೆ. ಇಸ್ಲಾಮ್ (ವಿಶ್ವಾಸ) ಎನ್ನುವ ಬುನಾದಿ ಮೇಲೆ ಪ್ರವಕ್ತ ತನ್ನ ಬೋಧನೆಯನ್ನು ತಿಳಿಸಿದ್ದಾನೆ, ದೇವರ ಮೇಲೆ ವಿಶ್ವಾಸ (ಇಸ್ಲಾಮ್) ಎಲ್ಲರಿಗೂ ಅವಶ್ಯವಾದದ್ದಾದರೂ ಕೊನೆಗೆ ಅದು ಸಹ ಒಂದು ಮತವಾಗಿ ಬದಲಾಗಿ ಹೋಗಿದೆ. ಸಾತಾನ್ ಅಥವಾ ಸೈತಾನ್ ಎನ್ನುವ ಮಾಯೆ ಮನುಷ್ಯನಲ್ಲಿದ್ದು ಪ್ರವಕ್ತರು ಹೇಳಿದ ದೈವ ಸಂದೇಶವನ್ನು ಸಹ ಮನುಷ್ಯನಿಗೆ ತಪ್ಪಾಗಿ ಅರ್ಥವಾಗುವ ಹಾಗೆ ಮಾಡಿರುವುದರಿಂದ ಇಸ್ಲಾಮ್‌ನಲ್ಲಿ ಸಹ ಪುನರ್ಜನ್ಮಗಳು ಇಲ್ಲವೆಂದು ಹೇಳಿದಂತೆ ಮನುಷ್ಯ ಪ್ರಚಾರ ಮಾಡಿಕೊಂಡಿದ್ದಾನೆ. ಇಸ್ಲಾಮ್‌ನಲ್ಲಿ ಹೇಳಿದ ದೈವ ಸೂತ್ರ ಅರ್ಥವಾಗದೆ ಹೋಗಿರುವುದರಿಂದ ಕೊನೆಗೆ ಎಲ್ಲರೂ ಜನ್ಮಗಳ ವಿಷಯದಲ್ಲಿ ತಪ್ಪಾಗಿ ತಿಳಿದಿದ್ದಾರೆ. ಇಸ್ಲಾಮ್‌ನಲ್ಲಿ ಪುನರ್ಜನ್ಮಗಳು ಇಲ್ಲವೆಂದು ಹೇಳುವುದಕ್ಕೆ ಅದಕ್ಕಿಂತ ಮೊದಲು ಹುಟ್ಟಿದ ಕ್ರೈಸ್ತವವೆ ಕಾರಣ ಎಂದು ಹೇಳಬಹುದು. ಕ್ರೈಸ್ತ ಮತದಲ್ಲಿಯೆ ಪುನರ್ಜನ್ಮಗಳು ಇಲ್ಲವೆಂದು ಪ್ರಚಾರವಾಗಿರುವುದರಿಂದ ಅದರಲ್ಲಿನ ಸಾತಾನ್, ಇಸ್ಲಾಮ್‌ನಲ್ಲಿ ಸೈತಾನ್ ಆಗಿ ಬದಲಾಗಿ ಅವರನ್ನು ಸಹ ಭ್ರಮೆಪಡುವಂತೆ ಮಾಡಿದೆ.

ಮರಣ ವಿಷಯವನ್ನು ವಿವರವಾಗಿ ಹೇಳಿಕೊಂಡರೆ ಒಬ್ಬ ಮನುಷ್ಯನನ್ನು ವಿಭಜಿಸಿ ನೋಡಿದರೆ ಒಟ್ಟಿನಲ್ಲಿ ಎರಡು ಭಾಗಗಳೆಂದು ಹೇಳಬಹುದು. ಒಂದು ಪ್ರಕೃತಿ ಭಾಗವಾದರೆ, ಎರಡನೆಯದು ಪರಮಾತ್ಮ ಭಾಗ. ಪ್ರಕೃತಿ ಭಾಗದಲ್ಲಿ ಒಟ್ಟಾರೆ ಶರೀರವಿದ್ದು, ಪರಮಾತ್ಮ ಭಾಗದಲ್ಲಿ ಜೀವಾತ್ಮ, ಆತ್ಮ ಇವೆ. ಅದೇ ವಿಧದಲ್ಲಿ ಎರಡು ಭಾಗಗಳಿಗು ನಾಶವಿದೆ. ಪ್ರಕೃತಿ ಭಾಗವಾದ ಶರೀರ ನಾಶವಾಗುವುದು, ಹಾಗೆ ಪರಮಾತ್ಮ ಭಾಗವಾದ ಜೀವಾತ್ಮ ನಾಶನವಾಗುವಂತದ್ದೆ, ಜೀವಾತ್ಮನೊಂದಿಗಿರುವ ಆತ್ಮ ನಾಶವಿಲ್ಲದ್ದೆಂದು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. **ಶರೀರ ನಾಶನವಾಗುವುದನ್ನು ಮರಣ ಎನ್ನುತ್ತೇವೆ. ಜೀವಾತ್ಮನು ನಾಶವಾಗುವುದನ್ನು**

**ಮೋಕ್ಷ ಎನ್ನುತ್ತೇವೆ.** ಹೇಗಾದರೆ ಶರೀರಕ್ಕೆ ಸಂಭವಿಸುವ ಮರಣವನ್ನು ಸಾವು ಎನ್ನುತ್ತಿದ್ದೇವೊ ಹಾಗೆ ಜೀವನಿಗೆ ಸಂಭವಿಸುವ ಮೋಕ್ಷವನ್ನು ಮುಕ್ತಿ ಎನ್ನುತ್ತೇವೆ. ಜೀವಾತ್ಮನು ಧರಿಸುವ ಶರೀರ ಎಷ್ಟೋ ಸಲ ನಾಶವಾಗುತ್ತಿದೆ, ಎಷ್ಟೋ ಸಲ ಜನ್ಮಿಸುತ್ತಿದೆ. ಆದರೆ ಜೀವಿಯು ಒಂದು ಸಲವೇ ಹುಟ್ಟಿದ್ದಾನೆ, ಒಂದು ಸಾರಿಯೆ ನಶಿಸುತ್ತಾನೆ. ಇದನ್ನು ಅನುಸರಿಸಿದರೆ ಶರೀರಕ್ಕೆ ಎಷ್ಟೋ ಸಾವು ಹುಟ್ಟುಗಳಿವೆ, ಆದರೆ ಜೀವಾತ್ಮನಿಗೆ ಜನ್ಮ ಒಂದೇ, ಹಾಗೆ ಮುಕ್ತಿ ಒಂದೇ. ಶರೀರ ಬದಲಾಗಿ ಹೊಸ ಶರೀರವನ್ನು ಜೀವಾತ್ಮನು ಧರಿಸಿದಾಗ ಅದನ್ನು ಪುನರ್ಜನ್ಮ ಎನ್ನುತ್ತಿದ್ದೇವೆ. ಆದರೆ ಅದನ್ನು ಜನ್ಮ ಎನ್ನುವುದಿಲ್ಲ. ಶರೀರ ವಿಷಯದಲ್ಲಿ ಜನ್ಮ ಎನ್ನುತ್ತಿದ್ದೇವೆ. ಜೀವಿಯು ಹೊಸ ಶರೀರ ಧರಿಸಿದರೆ ಅದನ್ನು ಸಂದರ್ಭಾನುಸಾರ ಜನ್ಮಿಸುವುದು ಅಂದರೂ ಅಥವಾ ಜನ್ಮ ಎಂದರೂ ಅದು ಶರೀರ ನಿಮಿತ್ತವಾಗಿ ಹೇಳಿರುವುದು ಆದರೆ ಜೀವಾತ್ಮನ ನಿಮಿತ್ತ ಹೇಳಿರುವಂಥದ್ದಲ್ಲ. ಈ ವಿಧದಲ್ಲಿ ಒಬ್ಬ ಮನುಷ್ಯನ ಶರೀರಕ್ಕೆ ಜನನ, ಮರಣಗಳು, ಮನುಷ್ಯನೊಳಗಿನ ಜೀವಾತ್ಮನಿಗೆ ಜನ್ಮ, ಮೋಕ್ಷಗಳಿವೆಯೆಂದು ತಿಳಿಯಬೇಕು. ಇದಕ್ಕೂ ಮೊದಲು ಹೇಳಿದ ಗ್ರಂಥಗಳಾದ **ಜನನ ಮರಣ ಸಿದ್ಧಾಂತವಾಗಲಿ, ಮರಣ ರಹಸ್ಯವಾಗಲಿ** ಶರೀರವನ್ನು ಉದ್ದೇಶದಲ್ಲಿಟ್ಟುಕೊಂಡು ಹೇಳಿರುವವೆಂದೇ ತಿಳಿಯಬೇಕು.

ಒಬ್ಬ ಮನುಷ್ಯ ಭೂಮಿಮೇಲೆ ಸೃಷ್ಠಿ ಮೊದಲಿನಲ್ಲಿಯೆ ಜನ್ಮಿಸಿದ್ದಾನೆ. ನಂತರ ಶರೀರಗಳು ಸಾಯುತ್ತಾ ಸಾಯುತ್ತಾ ಹೊಸ ಶರೀರಗಳನ್ನು ಧರಿಸುತ್ತಾ ಬರುತ್ತಿದ್ದಾನೆ. ಯಾವ ಶರೀರದಲ್ಲಿನ ಜ್ಞಾಪಕ ಆ ಶರಿರದ ಮನಸ್ಸಿಗೆ ಇರುತ್ತದೆ. ಆದರೆ ಹಿಂದಿನ ಶರೀರಗಳಲ್ಲಿನ ಜ್ಞಾಪಕ ಜೀವಾತ್ಮನಿಗೆ ತಿಳಿಯದೆ ಹೋಗಿದೆ. ಈಗಿನ ಶರೀರದಲ್ಲಿನ ಜ್ಞಾಪಕ ಮಾತ್ರ ಈಗಿನ ಶರೀರದಲ್ಲಿನ ಮನಸ್ಸು ಒದಗಿಸುತ್ತಿದೆ. ಆದ್ದರಿಂದ ಪ್ರಸ್ತುತ ಜನ್ಮ ಜ್ಞಾಪಕ ಮಾತ್ರವೆ ಮನುಷ್ಯನಿಗೆ ತಿಳಿಯುತ್ತದೆ. ಆದ್ದರಿಂದ ಮನುಷ್ಯ ತನಗೆ ಎಷ್ಟು ಪುನರ್ಜನ್ಮಗಳು ಹೊಂದಿರುತ್ತಾನೊ ಹೇಳಲು ಆಗುವುದಿಲ್ಲ. ಹಾಗೆ ಗತ ಜನ್ಮದ ವಿಷಯವನ್ನು ಸಹ ಹೇಳುವುದಿಲ್ಲ. ಇದು ಮನುಷ್ಯನ ಶರೀರದ ಸಾವು ಹುಟ್ಟುಗಳ ವಿಧಾನ. ಜೀವಾತ್ಮನ ಜನ್ಮ, ಮುಕ್ತಿ(ಮೋಕ್ಷ)

ವಿಷಯಕ್ಕೆ ಬಂದು ನೋಡಿದರೆ ಜೀವನು ಜನ್ಮಿಸಿದ್ದಾನೆ ಆದರೆ ಆತನು ಶರೀರಗಳು ಬದಲಾಯಿಸುತ್ತಾ ಇದ್ದಾನೆ ಹೊರತು ಮೋಕ್ಷವನ್ನು ಹೊಂದಿಲ್ಲ. ಒಂದು ಸಲ ಭೂಮಿಮೇಲೆ ಜನ್ಮಿಸಿದ ಜೀವನು ಅನೇಕ ಸಲ, ಅನೇಕ ಶರೀರಗಳನ್ನು ಧರಿಸುತ್ತಾ, ಅನೇಕ ಹೆಸರುಗಳಿಂದ ಚಲಾವಣೆ ಆಗುತ್ತಾ ಕಾಲವನ್ನು ಇಲ್ಲಿಯವರೆಗೂ ಕಳೆಯುತ್ತಾ ಬಂದಿದ್ದಾನೆ. ಆದರೆ ಜ್ಞಾಪಕ ಇಲ್ಲವಾದ್ದರಿಂದ ಇಲ್ಲಿಯವರೆಗು ಎಷ್ಟು ಶರೀರಗಳನ್ನು ಧರಿಸಿರುವುದು, ಎಷ್ಟು ಹೆಸರುಗಳಿಂದ ಚಲಾವಣೆ ಆಗಿರುವುದು ಯಾರಿಗೂ ತಿಳಿಯದು. ಎಲ್ಲಾದರೂ, ಯಾವಾಗಾದರೂ, ಯಾರಿಗಾದರೂ ಅವನ ಆತ್ಮ ಗತಜನ್ಮ ವಿಷಯವನ್ನು ತಿಳಿಸಿದರೆ ಅದರ ಆಧಾರದಿಂದ ಮನುಷ್ಯ ತಿರುಗಿ ಹುಟ್ಟುತ್ತಿದ್ದಾನೆಂದು ಹೇಳಿಕೊಳ್ಳುವುದಕ್ಕೆ ಆಧಾರ ಏರ್ಪಡುತ್ತಿದೆ. ಅಷ್ಟೇ ಅಲ್ಲದೆ ಬ್ರಹ್ಮವಿದ್ಯಾ ಶಾಸ್ತ್ರದ ಪ್ರಕಾರ ಮನುಷ್ಯನಿಗೆ ಪುನರ್ಜನ್ಮಗಳಿವೆ ಎನ್ನುವುದಕ್ಕೆ ಸಾಕ್ಷಿ ದೊರಕುತ್ತಿದೆ.

ಒಬ್ಬ ಮನುಷ್ಯ ಎಷ್ಟುಸಲ ಪುನರ್ಜನ್ಮಿಸಿದರೂ ಆ ಮನುಷ್ಯನಲ್ಲಿನ ಜೀವಾತ್ಮ ಜನ್ಮಿಸಿರುವುದು ಒಂದೇ ಸಲಯೆಂದು, ಆ ಮನುಷ್ಯ ಎಷ್ಟುಸಲ ಮರಣಿಸಿದರೂ ಆ ಮನುಷ್ಯನಲ್ಲಿನ ಜೀವಾತ್ಮನಿಗೆ ನಿಜವಾದ ಮರಣ (ಮುಕ್ತಿ) ಬರಲಿಲ್ಲವೆಂದು ಹೇಳಬಹುದು. ಜೀವಾತ್ಮ ಜನ್ಮಿಸಿ ಕೆಲವು ಲಕ್ಷ ವರ್ಷಗಳಾದರೂ, ಆತನಿಗೆ ಇಲ್ಲಿಯವರೆಗು ಬಾರದ ಮರಣ ಯಾವಾಗ ಬರುತ್ತದೊ ಹೇಳಲಾಗುವುದಿಲ್ಲ. ಜೀವಿಯು ಮರಣಿಸಬೇಕೆಂದರೆ ಅಥವಾ ಮುಕ್ತಿ ಹೊಂದಬೇಕೆಂದರೆ ಅದಕ್ಕಿಂತ ಮೊದಲು ದೈವಜ್ಞಾನವನ್ನು ಜೀವಾತ್ಮನು ತಿಳಿದಿರಬೇಕು. ಜೀವಾತ್ಮನು ನಿವಾಸಿಸುವ ಶರೀರಕ್ಕೆ ನಾಶ (ಮರಣ) ಜೀವಾತ್ಮನಿಗೆ ತಿಳಿಯದೆ ನಡೆಯುತ್ತಿದೆ. ಯಾವ ಜೀವಿಯೂ ತನ್ನ ಶರೀರ ಬಿಟ್ಟು ಹೋಗುತ್ತೇವೆಂದು ಅಂದುಕೊಳ್ಳುವ ಮೊದಲೆ, ಶರೀರ ತನ್ನನ್ನು ಬಿಟ್ಟು ನಶಿಸಿ ಹೋಗುತ್ತಿದೆ. ಜೀವಿಯು ಸಾಧಾರಣವಾಗಿ ಯಾವ ಪ್ರಯತ್ನ ಮಾಡದಿದ್ದರೂ ತಾನು ಧರಿಸಿದ ಶರೀರ ನಶಿಸಿ ಹೋಗುತ್ತಿದೆ. ಆದರೆ ಜೀವಿಯು ಎಷ್ಟೋ ತೀವ್ರ ಪ್ರಯತ್ನ ಮಾಡಿದರಾಗಲಿ ತನಗೆ ನಾಶ ಏರ್ಪಡಬಲ್ಲದು. ಜೀವಿಯು

ತಾನು ನಾಶನವಾಗುವುದಕ್ಕೆ ಎಷ್ಟೋ ದೈವ ಜ್ಞಾನವನ್ನು ಸಂಪಾಧಿಸಿ ಅದರ ಪ್ರಕಾರ ನಡೆದುಕೊಂಡಾಗ ತನ್ನ ಆರೋಗ್ಯಕ್ಕೆ ಕಾರಣವಾದ ಕರ್ಮ ಇಲ್ಲದೆ ಹೋಗುತ್ತದೆ. ಜೀವಿಯು ಭೂಮಿಮೇಲೆ ಜೀವಿಸುವುದಕ್ಕೆ ಕರ್ಮ ದಿವ್ಯವಾದ ಔಷಧವಾಗಿ ಕೆಲಸ ಮಾಡುತ್ತಿದೆ. ಜೀವಿಯನ್ನು ಎಷ್ಟೋ ಯುಗಗಳಿಂದ ಜೀವಿಸುವಂತೆ ಮಾಡುವ ಔಷಧಿಯಂತಹ ಕರ್ಮವನ್ನು ಮಿಂಚಿರುವುದು, ಅದಕ್ಕೆ ವಿಷ ಅಂತಹುದಾದ ದೈವಜ್ಞಾನವನ್ನು ಮನುಷ್ಯ ಜೀರ್ಣಿಸಿಕೊಂಡರೆ ಆಗ ಕರ್ಮ ನಶಿಸಿಹೋಗಿ ಜೀವಾತ್ಮನಿಗೆ ಮರಣ (ಮುಕ್ತಿ) ಏರ್ಪಡುತ್ತದೆ. ಇದೇ ವಿಷಯವನ್ನೇ ಮತ್ತೆ ಕೆಲವರು ಬೇರೆ ವಿಧವಾಗಿ ಹೇಳಿಕೊಂಡಿದ್ದಾರೆ. **ಶರೀರದೊಂದಿಗೆ ಇದ್ದು ಶರೀರ ಮರಣಗಳನ್ನು ಹೊಂದುವ ಜೀವಿಯನ್ನು ಮೃತ ಜೀವನೆಂದು, ಶರೀರಗಳನ್ನು ಬಿಟ್ಟು ಮುಕ್ತಿ ಹೊಂದಿ ಎಂದಿಗೂ ಶರೀರಗಳಲ್ಲಿ ಸಿಕ್ಕಿಕೊಳ್ಳದೆ ಶರೀರ ಮರಣಗಳಿಂದ ತಪ್ಪಿಸಿಕೊಂಡ ಜೀವಾತ್ಮನನ್ನು ಅಮೃತ ಜೀವಾತ್ಮನೆಂದು ವರ್ಣಿಸಿದ್ದಾರೆ.** ಆದ್ದರಿಂದ ಭಗವದ್ಗೀತೆಯಲ್ಲಾಗಲಿ, ಬೈಬಲ್‌ನಲ್ಲಾಗಲಿ ಮೋಕ್ಷ (ಮುಕ್ತಿ) ಹೊಂದಿದವನನ್ನು ಅಮೃತನೆಂದು, ಮುಕ್ತಿ ಹೊಂದದವನನ್ನು ಮೃತನೆಂದು ಕರೆಯಲಾಗಿದೆ. ಅದರ ಅರ್ಥ ಪ್ರಕಾರವೆ ದೈವಜ್ಞಾನ ತಿಳಿದವನನ್ನು ಅಮೃತವನ್ನು ಸ್ವೀಕರಿಸುವವನೆಂದು ಸಹ ಹೇಳಿದ್ದಾರೆ. ಇದೇ ಅರ್ಥದಿಂದ ಭಗವದ್ಗೀತೆಯಲ್ಲಿ ರಾಜವಿದ್ಯಾ ರಾಜಗುಹ್ಯ ಯೋಗದಲ್ಲಿ "ಅಮೃತಂ ಚೈವ ಮೃತ್ಯುಶ್ಚ" ಮೃತ್ಯುವಿಗೆ ಅಮೃತವಾಗಿದ್ದೇನೆ ಎಂದು ಹೇಳಿದ್ದಾನೆ. ಅಷ್ಟೇ ಅಲ್ಲದೆ ಅದೇ ಗೀತೆಯಲ್ಲಿಯೆ ಗುಣತ್ರಯ ವಿಭಾಗ ಯೋಗದ ಕೊನೆಯಲ್ಲಿ 27ನೇ ಶ್ಲೋಕದಲ್ಲಿ "ಅಮೃತಸ್ಯಾ ವ್ಯಯಸ್ಯ" ವ್ಯಯಕ್ಕೆ ಅಂದರೆ ಶರೀರ ನಾಶನಕ್ಕೆ ಅಥವಾ ಶರೀರ ಮೃತ್ಯುವಿಗೆ ಅಮೃತವಾಗಿ ಇದ್ದೇನೆ ಎಂದು ಸಹ ಹೇಳಿದ್ದಾನೆ.

ಇದು ಹೀಗಿದ್ದರೆ ಬೈಬಲ್‌ನಲ್ಲಿ ಇದೇ ಅರ್ಥದಿಂದ ಎರಡನೇ ಭಾಗವಾದ ಹೊಸ ಒಡಂಬಡಿಕೆಯಲ್ಲಿ ಎಫೆಸದವರಿಗೆ ಬರೆದ ಪತ್ರಿಕೆ ಎರಡನೆ ಅಧ್ಯಾಯದಲ್ಲಿ 11,12,13 ವಾಕ್ಯಗಳಲ್ಲಿ ಹೀಗಿದೆ. "ಮೊದಲು ಶರೀರ ವಿಷಯದಲ್ಲಿ ಅನ್ಯಜನರಾಗಿದ್ದು, ಶರೀರದಲ್ಲಿ ಕೈಯಿಂದ ಮಾಡಲಾಗಿರುವ ಸುನ್ನತಿ ಇರುವವರು

ಎನಿಸಿಕೊಂಡಿರುವವನಿಂದ, ಸುನ್ನತಿ ಇಲ್ಲದವರೆಂದ ನೀವು ಆ ಕಾಲದಲ್ಲಿ ಇಸ್ರಾಯೇಲ್‌ನಲ್ಲಿ ಸಹ ಪೌರರು ಆಗದೆ, ಪರದೇಶಿಗಳನ್ನೂ, ವಾಗ್ದಾನದ ಒಡಂಬಡಿಕೆಯಲ್ಲಿ ಇಲ್ಲದ ಪರ ಜನರನ್ನೂ, ನಿರೀಕ್ಷಣೆ ಇಲ್ಲದವರನ್ನೂ, ಈ ಲೋಕದಲ್ಲಿ ದೇವರನ್ನರಿಯದವರೂ, ಕ್ರಿಸ್ತನಿಗೆ ದೂರಸ್ಥರಾಗಿ ಇದ್ದೀರೆಂದು ನೀವು ಜ್ಞಾಪಕ ಮಾಡಿಕೊಳ್ಳಿರಿ. ಆತನಿಗೆ ಮೊದಲು ದೂರಸ್ಥರಾದ ನೀವು ಈಗ ಕ್ರೀಸ್ತ ಯೇಸುನಲ್ಲಿ ಕ್ರೀಸ್ತ ರಕ್ತದ ಮೂಲಕ ಸಮೀಪಸ್ಥರಾಗಿದ್ದೀರಿ." ಬೈಬಲ್‌ನಲ್ಲಿ ಬರೆದಿರುವ ಕೆಲವು ಪದಗಳು ಒಳ್ಳೆಯ ಅರ್ಥದಿಂದ ಕೂಡಿಕೊಂಡಿದ್ದರೂ ಬಹಳ ಜನ ಕ್ರೈಸ್ತ ಬೋಧಕರಿಗೆ ಸಹ ಅವುಗಳ ನಿಜಾರ್ಥ ತಿಳಿಯದೆ ಹೋಗಿರುವುದರಿಂದ ಬೈಬಲ್‌ನಲ್ಲಿನ ಭಾವವು ಸರಿಯಾಗಿ ಅರ್ಥವಾಗದೆ ಹೋಗಿದೆ. ಕ್ರೈಸ್ತ ರಕ್ತ ಎನ್ನುತ್ತಲೆ ಕ್ರೈಸ್ತವರೆಲ್ಲರಿಗು (ಶಿಲುಬೆ) ಮೇಲೆ ಶಿಕ್ಷಿಸಲ್ಪಟ್ಟ ಯೇಸು ಪ್ರಭುವಿನ ರಕ್ತ ನೆನಪಿಗೆ ಬರುತ್ತದೆ. ಆದರೆ ಆ ಭಾವಾರ್ಥವು ಸರಿಯಾದದ್ದಲ್ಲವೆಂದು ಯಾರಿಗೂ ತಿಳಿಯದು. ಯೇಸು ರಕ್ತದಿಂದ ಮನುಷ್ಯರಿಗೆ ಪಾಪ ಪರಿಹಾರವಿದೆಯೆಂದು, ಕ್ರೈಸ್ತ ಮತಕ್ಕೆ ಸೇರಿದವರಿಗೆ ಯೇಸು ಸೋರಿಸಿದ ರಕ್ತದಿಂದ ನಿಮ್ಮ ಪಾಪಗಳು ಹೋಗುತ್ತವೆಂದು ಹೇಳುತ್ತಿದ್ದಾರೆ. ಕೇಳುವವರೆಲ್ಲರೂ ಅವರ ಮಾತುಗಳು ಸತ್ಯವೆಂದು ನಂಬುತ್ತಿದ್ದಾರೆ. ಆದರೆ ಕ್ರಿಸ್ತ ಎಂದರೆ ದೇವರು ಎಂದು, ಕ್ರಿಸ್ತ ರಕ್ತ ಎಂದರೆ ದೇವರ ಜ್ಞಾನವೆಂದು ತಿಳಿಯದೆ ಹೋಗುತ್ತಿದ್ದಾರೆ. ದೈವಜ್ಞಾನದಲ್ಲಿ ಹೆಚ್ಚಿನದಾಗಿ ಎಲ್ಲ ಪದಗಳು ಸೂಕ್ಷ್ಮ ಅರ್ಥದಿಂದ ಕೂಡಿಕೊಂಡಿರುತ್ತವೆ. ಸ್ಥೂಲಭಾವಗಳಿಂದ ಜ್ಞಾನವಿರುವುದಿಲ್ಲ. ಯೇಸು ಬದುಕಿದ್ದಾಗಲು ಸಹ ನನ್ನ ನಿಬಂಧನೆ ರಕ್ತ ಎಂದು ಹೇಳಿದ್ದಾನಾಗಲಿ, ಶರೀರದಲ್ಲಿರುವ ಸಾಧಾರಣ ರಕ್ತವೆಂದು ಎಲ್ಲಿಯೂ ಹೇಳಲಿಲ್ಲ.

ಮೇಲೆ ಹೇಳಿರುವ 11,12,13 ವಾಕ್ಯಗಳಲ್ಲಿನ ಸಾರಾಂಶವನ್ನು ನಿಜಭಾವದಿಂದ ನೋಡಿದರೆ "ಪೂರ್ವವು ಇಸ್ರಾಯೇಲ್ ದೇಶದಲ್ಲಿ ಅಜ್ಞಾನಿಗಳಾಗಿದ್ದ ನೀವು ದೇವರಿಗೆ ದೂರದಲ್ಲಿ ಇದ್ದೀರೆಂದು, ದೇವರಿಗೆ ದೂರವಾಗಿರುವ ನೀವು ಈಗ ದೇವರ ವಿಷಯದಲ್ಲಿ ದೇವರ ಜ್ಞಾನದಿಂದ

ದೇವರಿಗೆ ಹತ್ತಿರದಲ್ಲಿ ಇದ್ದೀರ". ಎಂದು ಹೇಳಲಾಗಿದೆ. ಈ ವಾಕ್ಯಗಳಿಂದ ನಮಗೆ ಮುಖ್ಯವಾಗಿ ತಿಳಿಯುವುದೇನೆಂದರೆ! ಪೂರ್ವವು ಎರಡು ಸಾವಿರ ವರ್ಷಗಳ ಮೊದಲು ಇಸ್ರಾಯೇಲ್ ದೇಶದಲ್ಲಿ ಅಜ್ಞಾನಿಗಳಾಗಿ, ದೇವರ ಜ್ಞಾನ ತಿಳಿಯದವರಾಗಿ, ದೇವರಿಗೆ ದೂರವಾಗಿರುವ ಮನುಷ್ಯರು ಈಗ ಪ್ರಸ್ತುತ ಕಾಲದಲ್ಲಿ ದೇವರ ಜ್ಞಾನವು ತಿಳಿದಿರುವುದರಿಂದ ದೇವರಿಗೆ ಹತ್ತಿರದಲ್ಲಿ ಇದ್ದೀರೆಂದು ತಿಳಿಯುತ್ತಿದೆ. ಇದರಿಂದ ಅಜ್ಞಾನವಾಗಿ ಪೂರ್ವದಲ್ಲಿದ್ದ ಕೆಲವರು ಮನುಷ್ಯರು ಈಗ ಜ್ಞಾನಿಗಳಾಗಿ ಇದ್ದಾರೆಂದು ತಿಳಿಯುತ್ತಿದೆ. ಪೂರ್ವವು ಅಜ್ಞಾನಿಯಾಗಿ ದೇವರಿಗೆ ದೂರವಾಗಿ ಇದ್ದ ಮನುಷ್ಯ ಜನ್ಮಗಳು ಬದಲಾಯಿಸುತ್ತಾ ಬಂದು ಇಲ್ಲಿಗೆ ಜ್ಞಾನವನ್ನು ತಿಳಿದವನಾಗಿ ದೇವರಿಗೆ ಹತ್ತಿರವಾಗಿ ಇದ್ದಾನೆಂದೂ, ಹಾಗೆ ಜನ್ಮಗಳು ಬದಲಾಯಿಸಿರುವುದರಿಂದ ಇಷ್ಟು ಕಾಲಕ್ಕೆ ದೈವಜ್ಞಾನದಿಂದ (ಕ್ರಿಸ್ತ ರಕ್ತದಿಂದ) ಮನುಷ್ಯ ದೇವರಿಗೆ ದೂರದಲ್ಲಿರುವವನು ಹತ್ತಿರವಾಗಿದ್ದಾನೆಂದು ತಿಳಿಯುತ್ತದೆ. ಇದರಲ್ಲಿನ ಜ್ಞಾನದಿಂದ ಮನುಷ್ಯನಿಗೆ ಪುನರ್ಜನ್ಮಗಳಿವೆಯೆಂದು ಚೆನ್ನಾಗಿ ಅರ್ಥವಾಗುತ್ತದೆ. ಅದೇ ಎರಡನೇ ಅಧ್ಯಾಯದಲ್ಲಿ ಮೊದಲ ವಾಕ್ಯದಲ್ಲಿನ ಪದಗಳನ್ನು ನೋಡಿದರೆ ಹೇಳಿರುವ ಜ್ಞಾನವು ಸೂಕ್ಷ್ಮವಾದ ಅರ್ಥಗಳಿಂದ ಕೂಡಿಕೊಂಡಿದೆಯೆಂದು ಅರ್ಥವಾಗುತ್ತದೆ. "ನಿಮ್ಮ ಅಪರಾಧಗಳಿಂದಲೂ, ಪಾಪಗಳಿಂದಲೂ ನೀವು ಸತ್ತವರಂತೆ ಇದ್ದರೂ, ಆತನು ನಿಮ್ಮನ್ನು ಸಹ ಬದುಕಿಸುವನು". ಈ ವಾಕ್ಯದಲ್ಲಿ ಆತನು ಎಂದರೆ ದೇವರೆಂದು ಸುಲಭವಾಗಿ ಅರ್ಥವಾಗಿಹೋಗುತ್ತದೆ. ಆದರೆ ಸತ್ತವರಾಗಿ ಇದ್ದಾಗ ಎನ್ನುವ ಮಾತು ಎಲ್ಲರನ್ನು ತಪ್ಪುದಾರಿ ಹಿಡಿಸುವ ಅವಕಾಶ ಇದೆ. ದೂರದವರು ಹತ್ತಿರವಾಗಿದ್ದಾರೆ ಎಂದು ಹೇಳಿದ ಹಾಗೆ, ಸತ್ತವರು ಬದುಕಿದ್ದಾರೆ ಎಂದು ಹೇಳಿದ್ದಾರೆ. ಸತ್ತವರೆಂದರೆ ದೈವಜ್ಞಾನ ಇಲ್ಲದವರೆಂದು ಅರ್ಥ. ಮನುಷ್ಯ ಎಷ್ಟೋ ಪಾಪಗಳನ್ನು ಮಾಡಿ ಆ ಪಾಪಗಳ ಮಧ್ಯದಲ್ಲಿದ್ದು, ದೈವತ್ವ ಎನ್ನುವ ಚೈತನ್ಯ ಇಲ್ಲದಿರುವುದನ್ನು ಜ್ಞಾನದ ಪ್ರಕಾರ ಸತ್ತವನೆಂದು ಹೇಳಲಾಗಿದೆ. ಅಂತಹ ಮನುಷ್ಯನನ್ನು ದೇವರು ತನ್ನ ಪ್ರವಕ್ತರಿಂದ ತನ್ನ ಜ್ಞಾನವನ್ನು ತಿಳಿಸಿ ದೈವತ್ವ(ಕ್ರಿಸ್ತ)ದಿಂದ ಬದುಕಿಸಿದ್ದಾನೆಂದು, ಜ್ಞಾನದಿಂದ ಚೈತನ್ಯವಂತರನ್ನು ಮಾಡಿದ್ದಾನೆಂದು ಹೇಳಬಹುದು.

ಭಗವದ್ಗೀತೆಯಲ್ಲಿ ಜ್ಞಾನಯೋಗ *37*ನೇ ಶ್ಲೋಕದಲ್ಲಿ ಹೇಳಿರುವ "ಯಥೈಧಾಂಸಿ ಸಮಿದ್ಧೋಗ್ನಿ ರ್ಭಸ್ಮಸಾತ್ಕುರು ತೇರ್ಜುನ, ಜ್ಞಾನಾಗ್ನಿ ಸರ್ವ ಕರ್ಮಾಣಿ ಭರ್ಸ್ಮಸಾತ್ಕುರುತೇ ತಥಾ" ಯಾವ ವಿಧವಾಗಿ ಅಗ್ನಿಯಲ್ಲಿ ಕಟ್ಟೆಗೆಗಳು ಸುಟ್ಟು ಹೋಗುತ್ತಿವೆಯೊ, ಅದೇ ವಿಧದಲ್ಲಿ ಜ್ಞಾನವೆನ್ನುವ ಅಗ್ನಿಯಲ್ಲಿ ಸರ್ವ ಕರ್ಮಗಳು (ಸರ್ವ ಪಾಪಪುಣ್ಯಗಳು) ಸುಟ್ಟು ಹೋಗುತ್ತವೆ". ಎಂದು ಭಗವಂತನು ಹೇಳಿದಂತೆ, ಬೈಬಲ್‌ನಲ್ಲಿ ಸಹ ಕ್ರಿಸ್ತ ರಕ್ತದಿಂದ ಪಾಪಗಳು ಪರಿಹಾರವಾಗುತ್ತವೆಂದು ಹೇಳಿದ್ದಾರೆ. ಗೀತೆಯಲ್ಲಿ ದೇವರ ಜ್ಞಾನದಿಂದ ಎಂದು ಹೇಳಿದರೆ, ಬೈಬಲ್‌ನಲ್ಲಿ ಕ್ರಿಸ್ತ ರಕ್ತದಿಂದ ಎಂದು ಹೇಳಿರುವುದನ್ನು ಗ್ರಹಿಸಿದರೆ ಎರಡು ಕಡೆ ದೇವರ ವಾಕ್ಯ ಒಂದಾಗಿಯೆ ಇದೆಯೆಂದು ತಿಳಿಯುತ್ತಿದೆ. ಕ್ರಿಸ್ತ ಎಂದರೆ ದೇವರೆಂದು, ರಕ್ತ ಎಂದರೆ ಜ್ಞಾನ ಎಂದು ಅರ್ಥ ಮಾಡಿಕೊಂಡಾಗಲೆ ದೇವರ ವಾಕ್ಯ ಎಂದಿಗೂ ಬದಲಾಗುವುದಿಲ್ಲ ಎಂದು ಅರ್ಥವಾಗುತ್ತದೆ. ಹಾಗಲ್ಲದೆ ಸರ್ವ ಸೃಷ್ಠಿಕರ್ತನಾದ ದೇವರು ಒಬ್ಬನೇ ಎಂದು ತಿಳಿಯದೆ ಒಂದೊಂದು ಮತಕ್ಕು ಒಬ್ಬೊಬ್ಬ ದೇವರಿದ್ದಾನೆಂದು ತಿಳಿದುಕೊಳ್ಳುತ್ತಾ, ನಿಮ್ಮ ದೇವರು ಬೇರೆ, ನಮ್ಮ ದೇವರು ಬೇರೆಯೆಂದು ತಿಳಿದುಕೊಳ್ಳುವುದು ಅಜ್ಞಾನವಾಗುತ್ತದೆ. ಎಲ್ಲ ಮತಗಳಿಗು ಅಧಿಪತಿ ಒಬ್ಬನೇ ಎಂದು ತಿಳಿದ ದಿನ ಆತನು ಹೇಳಿದ ಜ್ಞಾನವೆಲ್ಲಾ ಒಂದೇ ಎಂದು ತಿಳಿಯಬಲ್ಲದು.

ಕ್ರೈಸ್ತ ಮತದಲ್ಲಿ ಪುನರ್ಜನ್ಮಗಳು ಇಲ್ಲ ಎನ್ನುವುದು ಕೇಳಿದ್ದೇವೆ. ಆದರೆ ಬೈಬಲ್‌ನಲ್ಲಿ ದೇವರು ಹಾಗೆ ಹೇಳಲಿಲ್ಲ ಎನ್ನುವುದಕ್ಕೆ ಮತ್ತೊಂದು ಉದಾಹರಣೆಯನ್ನು ಬೈಬಲ್‌ನಲ್ಲಿಯೇ, ತೋರಿಸುತ್ತಿದ್ದೇನೆ ನೋಡಿರಿ. ಬೈಬಲ್ ನಲ್ಲಿ ಎಲ್ಲದಕ್ಕಿಂತ ಉತ್ತಮವಾದದ್ದು ಯೊಹಾನ್ ಸುವಾರ್ತೆ ಎಂದು ಹೇಳಬಹುದು. ಅದರಲ್ಲಿ 15ನೇ ಅಧ್ಯಾಯದಲ್ಲಿ ಕೊನೆಯಲ್ಲಿರುವ 26, 27 ವಾಕ್ಯಗಳಲ್ಲಿ "ತಂದೆಯ ಬಳಿಯಿಂದ ನಿಮ್ಮ ಹತ್ತಿರಕ್ಕೆ ನಾನು ಕಳುಹಿಸಿಕೊಡುವ ಆದರಣಕರ್ತ, ಎಂದರೆ ತಂದೆಯ ಬಳಿಯಿಂದ ಹೊರಡುವ ಸತ್ಯಸ್ವರೂಪಿಯಾದ ಆತ್ಮನು ಬಂದಾಗ, ಆತನು (ಆದರಣಕರ್ತ) ನನ್ನನ್ನು ಕುರಿತು ಸಾಕ್ಷಿ ಹೇಳುವನು.

ನೀವು ಮೊದಲಿನಿಂದ ನನ್ನ ಹತ್ತಿರ ಇದ್ದಕಾರಣ ನೀವೂ ಸಾಕ್ಷಿಗಳಾಗಿದ್ದೀರಿ". ಈ ವಾಕ್ಯದಲ್ಲಿ ಪ್ರಜೆಗಳು ಯೇಸುಪ್ರಭು ಇದ್ದಾಗ ಯೇಸುವನ್ನು ನೋಡಿದವರು, ಆತನ ಬೋಧನೆಗಳು ಕೇಳಿರುವವರು ಕೆಲವು ಸಾವಿರ, ನೂರು ವರ್ಷಗಳು ಕಳೆದ ನಂತರ ಆದರಣಕರ್ತನು ಬಂದಾಗ ಸಹ ಹುಟ್ಟಿರುತ್ತೀರೆಂದು, ಆದರಣ ಕರ್ತ ಹೇಳಿದ ಯೇಸು ಮಾತುಗಳನ್ನು ಅವರು ಸಹ ಸುಲಭವಾಗಿ ಗುರುತು ಹಿಡಿಯುತ್ತಾರೆಂದು ತಿಳಿಯುತ್ತದೆ. ನೀವು ಮೊದಲಿನಿಂದ ಇರುವವರು ಎನ್ನುವುದರಿಂದ ಮನುಷ್ಯರಾದ ನಾವು ಸೃಷ್ಟಿ ಆದಿಯಿಂದ ಪುನರ್ಜನ್ಮಗಳು ಹೊಂದುತ್ತಾ ಇದ್ದೇವೆಂದು ತಿಳಿಯುತ್ತಿದೆ. ಪುನರ್ಜನ್ಮಗಳನ್ನು ಕುರಿತು ಬೈಬಲ್‌ನಲ್ಲಿ ಇದಕ್ಕಿಂತ ಮೀರಿದ ಸಾಕ್ಷಿ ಅವಶ್ಯವಿಲ್ಲ. ಇಂತಹುದೆ ಮತ್ತೊಂದು ಮತ್ತಾಯ ಸುವಾರ್ತೆಯಲ್ಲಿ 12ನೇ ಅಧ್ಯಾಯದಲ್ಲಿ 31,32 ವಾಕ್ಯಗಳಲ್ಲಿ "ಪ್ರತಿ ಪಾಪವನ್ನು, ದೂಷಣ ಮನುಷ್ಯರಿಗೆ ಕ್ಷಮಿಸಲಾಗುತ್ತದೆ ಆದರೆ, ಆತ್ಮ ವಿಷಯವಾದ ದೂಷಣಕ್ಕೆ ಪಾಪಕ್ಷಮಾಪಣೆ ಇಲ್ಲ. ಮನುಷ್ಯ ಕುಮಾರನಿಗೆ ವಿರೋಧವಾಗಿ ಮಾತನಾಡುವವನಿಗೆ ಪಾಪಕ್ಷಮಾಪಣೆ ಇರುತ್ತದೆ. ಆದರೆ ಪರಿಶುದ್ಧಾತ್ಮಕ್ಕೆ ವಿರೋಧವಾಗಿ ಮಾತನಾಡುವವನಿಗೆ ಈ ಯುಗದಲ್ಲಾರದೂ, ಬರುವ ಯುಗದಲ್ಲಾದರೂ ಪಾಪಕ್ಷಮಾಪಣೆ ಇಲ್ಲ ಎಂದು ಇದೆ. ಈ ವಾಕ್ಯದಲ್ಲಿ ಈ ಯುಗದಲ್ಲಾದರೂ, ಬರುವ ಯುಗದಲ್ಲಾದರೂ ಎಂದು ಹೇಳಿರುವುದರಿಂದ ಒಂದು ಯುಗದಲ್ಲಿ ಇರುವ ಮನುಷ್ಯನೆ ನಂತರ ಯುಗದಲ್ಲಿ ಸಹ ಇರುವನೆಂದು ಅರ್ಥ ಅಲ್ಲವೆ! ಒಂದು ಯುಗ ಕೆಲವು ಲಕ್ಷ ವರ್ಷಗಳ ಕಾಲವಿರುತ್ತದೆ. ಹಾಗಿರುವಾಗ ಎರಡು ಯುಗಗಳ ಕಾಲ ಪಾಪವನ್ನು ಮನುಷ್ಯ ಅನುಭವಿಸಬೇಕೆಂದರೆ, ಮನುಷ್ಯ ಎಷ್ಟೋ ಸಲ ಸತ್ತು ಮತ್ತೆ ಹುಟ್ಟಬೇಕಾಗಿರುತ್ತದೆ. ಈ ಮಾತಿನ ಪ್ರಕಾರ ಸಹ ಪುನರ್ಜನ್ಮಗಳು ಇದ್ದಂತೆ ಎಂದು ಬೈಬಲ್‌ನಿಂದ ತಿಳಿಯುತ್ತದೆ.

ಈ ವಿಧದಲ್ಲಿ ದೇವರು ತನ್ನ ಪ್ರವಕ್ತರಿಂದ ಎಲ್ಲಾಕಡೆ ಮನುಷ್ಯನಿಗೆ ಪುನರ್ಜನ್ಮಗಳಿದ್ದ ಹಾಗೆ ಹೇಳಿಸಿದ್ದಾನೆ. ಆದರೆ ಹೇಳಿರುವ ಜ್ಞಾನವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಮನುಷ್ಯ ಪುನರ್ಜನ್ಮಗಳ ವಿಷಯದಲ್ಲಿ ದೇವರ ಜ್ಞಾನವನ್ನು

ತಪ್ಪಾಗಿ ಅರ್ಥ ಮಾಡಿಕೊಂಡಿದ್ದಾನೆಂದು ಹೇಳಬಹುದು. ನಾವು ಈ ವಿಷಯವನ್ನು ಹೇಳಿದರೆ ಕೆಲವರು ಕ್ರೈಸ್ತರು, ಮತ್ತೆ ಕೆಲವರು ಹಿಂದೂಗಳು ಈ ವಿಧದಲ್ಲಿ ನನ್ನನ್ನು ಪ್ರಶ್ನಿಸಿದ್ದಾರೆ. ಈ ಕಡೆ ಭಗವದ್ಗೀತೆಯಲ್ಲಾಗಲಿ, ಆ ಕಡೆ ಬೈಬಲ್‌ನಲ್ಲಾಗಲಿ ಪುನರ್ಜನ್ಮ ವಿಷಯ ಹೇಳಿದ್ದಾರೆಂದು ಒಪ್ಪಿಕೊಳ್ಳಬಹುದು. ಆದರೆ ನೀನು ಹೇಳುತ್ತಿರುವ ಮರಣ ಸಿದ್ಧಾಂತವಾಗಲಿ, ಮರಣ ರಹಸ್ಯವಾಗಲಿ ಯಾವ ಗ್ರಂಥದಲ್ಲಿಯೂ ಇಲ್ಲ ಅಲ್ಲವೆ! ಮೂಲ ಗ್ರಂಥಗಳಾದ ಬೈಬಲ್, ಭಗವದ್ಗೀತೆಯಲ್ಲಿ ಹೇಳಿದ ವಿಷಯಗಳು ನೀನು ಹೇಗೆ ಹೇಳುತ್ತಿದ್ದೀಯ? ಎಂದು ಕೇಳಿದ್ದಾರೆ. ಅದಕ್ಕೆ ನಾವು ಸಮಾಧಾನವನ್ನು ಹೀಗೆ ಹೇಳಿದ್ದೇವೆ. ದೇವರು ಮೂಲ ಗ್ರಂಥಗಳಾದ ಬೈಬಲ್, ಭಗವದ್ಗೀತೆಯಲ್ಲಿ ಹೇಳಿದ ಜ್ಞಾನವನ್ನೆಲ್ಲ ಜ್ಞಾಪಕ ಮಾಡುತ್ತಾ, ಆ ಗ್ರಂಥಗಳಲ್ಲಿ ಹೇಳದ ಸಮಸ್ತವನ್ನು ನಿಮಗೆ ತಿಳಿದುಬರುತ್ತವೆಂದು ಮೊದಲೆ ಹೇಳಿದ್ದಾನೆ. ದೇವರು ಹೇಳಿದ ಮಾತಿನ ಪ್ರಕಾರ ನಮ್ಮಿಂದ ಮೂಲಗ್ರಂಥಗಳಲ್ಲಿ ಹೇಳದ ಎಷ್ಟೋ ವಿಷಯಗಳು ಹೊರಗಡೆ ಬಂದಿವೆಯೆಂದು ತಿಳಿದುಕೊಳ್ಳುತ್ತೇನೆ. ಹೊಸದಾಗಿ ಹೇಳಿರುವ ಸಮಸ್ತ ಜ್ಞಾನವು ನಾನು ಹೇಳಿರುವುದು ಯಾವ ಮಾತ್ರವು ಅಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಷಯವೊಂದಿದೆ. ಈ ಮಧ್ಯದಲ್ಲಿ ಒಬ್ಬ ವ್ಯಕ್ತಿ ನನ್ನನ್ನು ಒಂದು ಪ್ರಶ್ನೆಯನ್ನು ಕೇಳಿದನು. ಅದೇನೆಂದರೆ! ನೀವು ರಚಿಸಿದ ಗ್ರಂಥವನ್ನು ಓದಿದ್ದೇನೆ ಅದರಲ್ಲಿ ಬಹಳಕಡೆ ನಾವು ಹೇಳುವುದೇನೆಂದರೆ! ಎಂದು ಬಹುವಚನದಲ್ಲಿ ಹೇಳಿಕೊಂಡಿದ್ದೀರ. ಒಂದೊಂದು ಕಡೆ ನೀವು ನನ್ನನ್ನು ಕೇಳಿದಾಗ ಎಂದು ಏಕ ವಚನವನ್ನು ಹೇಳಿದ್ದೀರ. ಏಕವಚನವಾಗಿ ನನ್ನನ್ನು ನಾನು ಎಂದು ಅನ್ನಬಹುದು. ಆದರೆ ನಿಮ್ಮನ್ನು ಯಾರಾದರು ಸಂಬೋಧಿಸುವಾಗ ಬಹುವಚನವಾಗಿ ಸಂಬೋಧಿಸಬಹುದು. ಹಾಗಲ್ಲದೆ ನಿಮ್ಮಷ್ಟಕ್ಕೆ ನೀವು ಬಹುವಚನವನ್ನು ಹೇಳುತ್ತಾ ನಾವು ಹೇಳುವುದೇನೆಂದರೆ, ನಮ್ಮ ಉತ್ತರ ಏನೆಂದರೆ ಎಂದು ಬರೆದಿದ್ದೀರ. ಹಾಗೆ ಬರೆಯುವುದರಲ್ಲಿ ನೀವು, ನಿಮ್ಮ ಆಶ್ರಮದವರೆಲ್ಲಾ ಸೇರಿ ಹೇಳಿದಹಾಗೆ ಎಂದು ನಮಗೆ ಅರ್ಥವಾಗುತ್ತಿದೆ. ಆ ರೀತಿ ಅನೇಕ ಕಡೆ ತಮ್ಮನ್ನು ತಾವು ಬಹುವಚನವಾಗಿ ಹೇಳಿಕೊಳ್ಳುತ್ತಾ ಎಲ್ಲೋ

ಒಂದು ಕಡೆ ನಾನು, ನನ್ನನ್ನು ಎಂದು ಬರೆಯುವುದರಲ್ಲಿ ಅಂತರಾರ್ಥವೇನು? ಎದುರಿಗಿರುವವರು ಗೌರವ ಸೂಚನೆಯಾಗಿ ನೀವು ಎಂದು ಸಂಬೋಧಿಸಬಹುದು ಆದರೆ, ನಾವು ಎಂದು ನೀವು ಹೇಳಿಕೊಳ್ಳುವುದು ನಿನ್ನನ್ನು ನೀನು ದೊಡ್ಡದಾಗಿ ಹೇಳಿಕೊಂಡ ಹಾಗೆ ಅಲ್ಲವೆ! ಹಾಗೆ ಹೇಳಿಕೊಳ್ಳುವುದು ಅಹಂಕಾರಕ್ಕೆ ಗುರುತಲ್ಲವೆ?" ಎಂದು ಕೇಳಿದ್ದಾರೆ.

ಅದಕ್ಕೆ ಉತ್ತರವಾಗಿ ನಿಮಗೆ ಕಾಣಿಸುವ ನಾನು ಹೇಳುವುದು ಏನೆಂದರೆ! ಭಗವದ್ಗೀತೆ, ಬೈಬಲ್ ಮೊದಲಾದ ಮೂಲ ಗ್ರಂಥಗಳಲ್ಲಿ ಹೇಳದ **ಸಮಸ್ತ** ಜ್ಞಾನ ವಿಷಯಗಳನ್ನು ನಾವು ಬರೆದಿದ್ದೇವೆ. ಆದರಣಕರ್ತನಾಗಿ ಪರಿಶುದ್ಧಾತ್ಮ ಬಂದು **ಸಮಸ್ತವನ್ನು** ನಿಮಗೆ ಬೋಧಿಸಿ ನಾನು ನಿಮ್ಮೊಂದಿಗೆ ಹೇಳಿದ ಸಂಗತಿಗಳೆಲ್ಲವನ್ನು ಜ್ಞಾಪಕ ಮಾಡುವುದು ಎಂದು ಪರಿಶುದ್ಧ ಗ್ರಂಥದಲ್ಲಿ ಬರೆಯಲಾಗಿದೆ. ಆದರೆ ನನ್ನ ಗ್ರಂಥಗಳಲ್ಲಿ ಬರೆದಿರುವ ಸಮಸ್ತ ಜ್ಞಾನ ವಿಷಯಗಳನ್ನು ನಾವು ಬರೆದಿದ್ದೇವೆ ಎಂದು ಹೇಳಲಾಗಿದೆ. ನಿಮಗೆ ಅದು ಅಹಂ ಆಗಿ ಕಾಣಿಸಿದರೂ ನಾನು ಮಾತ್ರ ಜ್ಞಾಪಕದಲ್ಲಿದ್ದು ಜ್ಞಾನವನ್ನು ಜ್ಞಾಪಕದಲ್ಲಿಟ್ಟುಕೊಂಡು, ನನ್ನನ್ನು ನಾನು ಮರೆಯದ ಹಾಗೆ ನನ್ನ ಪಕ್ಕದಲ್ಲಿರುವ ಅವನನ್ನು ಜ್ಞಾಪಕದಲ್ಲಿಟ್ಟುಕೊಂಡು ಬರೆದಿರುವುದೆಂದು ತಿಳಿಸುತ್ತಿದ್ದೇನೆ. ನಾನಿರುವ ಶರೀರದಲ್ಲಿ ನಾನು ಏನೂ ತಿಳಿಯದವನು. ನಾನು ಐದು ವಿಧಗಳಲ್ಲಿ ಅಂಧನು. ನೋಡಲಾರೆ, ಕೇಳಲಾರೆ, ಹಾಗೆ ಉಳಿದವು ಯಾವವು ತಿಳಿಯವು. ಅಂತಹ ನನಗೆ ಯಾವ ಜ್ಞಾನವು ತಿಳಿಯದು. ಆದರೆ ನನ್ನೊಂದಿಗೆ ಶರೀರದಲ್ಲಿರುವ ನನ್ನ ಸ್ನೇಹಿತನು ಮತ್ತು ನನಗೆ ನೆರೆಯವನಾದ ಆತ್ಮಕ್ಕೆ ಸಮಸ್ತವು ತಿಳಿಯುವುದು. ಎಲ್ಲವನ್ನು ತಿಳಿದಿರುವ ನನ್ನ ನೆರೆಯವನು ತಿಳಿಸಿದರೆ ನನಗೆ ತಿಳಿಯುವುದು ಇಲ್ಲವಾದರೆ ಸ್ವತಃವಾಗಿ ನನಗೆ ಏನೂ ತಿಳಿಯದು. ನನ್ನ ಆತ್ಮ ನನಗೆ ಹಿತನಾಗಿ ಇದ್ದು ನನ್ನಿಂದ ಸಮಸ್ತವನ್ನು ಬರೆಯಿಸುತ್ತದೆ. ಆದುದರಿಂದ ನಾನು ಬರೆಯುವವನು, ನನ್ನ ಸ್ನೇಹಿತನು ಹೇಳುವವನು. ಒಂದು ವಿಷಯವನ್ನು ನಿಮ್ಮ ಲೆಕ್ಕದಲ್ಲಿ ನಿಮಗೆ ಕಾಣಿಸುವ ಹಾಗೆ ನಾನೇ ಬರೆದರೂ, ಅದು ನನ್ನ ಲೆಕ್ಕದಲ್ಲಿ ನನ್ನ ಆತ್ಮ ಹೇಳಿರುವುದು ನಾನು ಒಬ್ಬನೇ ಹೇಳಿದ ವಿಷಯ ಯಾವುದೂ

ಇಲ್ಲ. ಆದ್ದರಿಂದ ಪ್ರತಿ ಪ್ರಶ್ನೆಗು ಉತ್ತರವನ್ನು ಬರೆಯುವಾಗ ನಾವು ಹೇಳುವುದು ಏನೆಂದರೆ, ಎಂದು ಬರೆಯುತ್ತೇವೆ ಹೊರತು ನಾನು ಬರೆದಿರುವುದೆಂದು ಎಂದಿಗೂ ಬರೆಯುವುದಿಲ್ಲ. ಕೆಲವರಿಗೆ ಅಂತರ್ಮುಖ ಜ್ಞಾನ ತಿಳಿಯದೆ ಇರುವುದರಿಂದ, ಅವರಿಗಿರುವ ಅಜ್ಞಾನ ದೃಷ್ಠಿಗೆ ನಾನು ಅಹಂಕಾರಿಯಾಗಿ ಕಾಣಿಸಿದರೂ ನಾನು ಅಹಂಕಾರದಿಂದ ಯಾವ ಕೆಲಸವೂ ಮಾಡಿಲ್ಲ. ಆತ್ಮ ಮಾಡಿಸುತ್ತದೆಂದು ಹೇಳುತ್ತಿದ್ದೇನೆ. ಆತ್ಮ, ನಾನು (ಜೀವಾತ್ಮ) ಇಬ್ಬರೂ ಸೇರಿ ಮಾಡುವುದರಿಂದ ನಾವು ಎನ್ನುತ್ತಿದ್ದೇವೆ. ನಾವು ಎಂದರೆ ನಾನು, ಬಾಹ್ಯವಾಗಿ ನನ್ನ ಸುತ್ತ ಪಕ್ಕದಲ್ಲಿರುವವರನ್ನು ಎಂದುಕೊಳ್ಳುವುದು ನಿಮ್ಮ ತಪ್ಪೇ ಆದರೆ, ನನ್ನ ತಪ್ಪಲ್ಲ.

ನಿಮ್ಮ ದೃಷ್ಠಿಯಲ್ಲಿ ನನ್ನ ಶರೀರ ಒಂದೇ ಕಾಣಿಸುತ್ತಿದೆ. ಆದರೆ ನೀವು ಕೇಳುತ್ತಿರುವಾಗ ನನ್ನನ್ನು ನೀವು ಕೇಳಿದಂತೆ ಎಂದು ಏಕವಚನದಿಂದಲೆ ಬರೆದಿದ್ದೇವೆ. ನಾನು ಒಬ್ಬನೆ ನಿಮ್ಮ ಲೆಕ್ಕದಲ್ಲಿ ಇರುವುದರಿಂದ ಕೆಲವು ಸಂಧರ್ಭಗಳಲ್ಲಿ ಅಲ್ಲಲ್ಲಿ ಏಕವಚನವನ್ನು ಹೇಳಬೇಕಾಗಿ ಬಂದಿದೆ. ನೀವು ಹೇಗೆ ತಿಳಿದುಕೊಂಡರೂ ನನಗೆ ತಿಳಿದಿದ್ದು ಏನೂ ಇಲ್ಲ. ಆದರೆ ನಮಗೆ ಸಮಸ್ತವು ತಿಳಿದಿದೆಯೆಂದು ಬರೆಯುತ್ತಿದ್ದೇವೆ. ಎಷ್ಟು ದೊಡ್ಡ ಜ್ಞಾನ ವಿಷಯವನ್ನು ಹೇಳಿದರೂ, ಮೂಲ ಗ್ರಂಥಗಳಲ್ಲಿ ಇಲ್ಲದ ಜ್ಞಾನವನ್ನು ಶಾಸ್ತ್ರಬದ್ಧವಾಗಿ ಹೇಳಿದರೂ, ಅದು ನನ್ನ ಕೆಲಸವಲ್ಲ. ಅದನ್ನು ಆತ್ಮ ಹೇಳಿದೆಯೆಂದು ನನಗೆ ಚೆನ್ನಾಗಿ ಗೊತ್ತು. ಅದೇ ಆತ್ಮಕ್ಕೆ ಗತ ಜನ್ಮದ ವಿಷಯಗಳೆಲ್ಲಾ ಗೊತ್ತು. ಆದ್ದರಿಂದ ಸಮಸ್ತ ಜ್ಞಾನ ವಿಷಯಗಳನ್ನು ತಿಳಿಸುವ ಆತ್ಮಕ್ಕೆ ಹಿಂದಿನ ಜನ್ಮ ಜ್ಞಾಪಕಗಳನ್ನು ತಿಳಿಸುವುದು ಏನಷ್ಟು ದೊಡ್ಡ ಕೆಲಸವಲ್ಲ. ಭೂಮಿಮೇಲೆ ದೈವಜ್ಞಾನ ಸಂಪೂರ್ಣವಾಗಿ ನಿಂತುಕೊಳ್ಳಲು ಆಗಾಗ, ಅಲ್ಲಲ್ಲಿ ಪುನರ್ಜನ್ಮ ಜ್ಞಾಪಕಗಳನ್ನು ಆತ್ಮ ತಿಳಿಸುತ್ತಿರುತ್ತದೆ ಎನ್ನುವ ವಿಷಯವನ್ನು ಮರೆಯಬಾರದು. ಆತ್ಮ ಎಷ್ಟು ದೊಡ್ಡ ಜ್ಞಾನ ವಿಷಯವನ್ನಾದರೂ ತಿಳಿಸುತ್ತದೆ. ಎಷ್ಟು ದೊಡ್ಡ ಜ್ಞಾಪಕವನ್ನಾದರೂ ಮಾಡುತ್ತದೆ. ಹಾಗೆ ದೈವಜ್ಞಾನದವೊಂದು ನಿದರ್ಶನಕ್ಕೆ ಸಾಕ್ಷಿಯಾಗಿ ಏನನ್ನಾದರೂ

ಆತ್ಮ ಮಾಡಿಸಿ ತೋರಿಸುತ್ತದೆ. ಅಂತಹ ಆತ್ಮ ಎಷ್ಟೋ ಜನ ಆಧ್ಯಾತ್ಮಿಕರಿಗೂ ಸಹ ತಿಳಿಯದೆ ಹೋಗುವುದು ವಿಚಿತ್ರ. ಇಲ್ಲಿಯವರೆಗೂ ನಾವು ಹೇಳಿಕೊಂಡ ಪುನರ್ಜನ್ಮ ವಿಷಯಗಳನ್ನು ಆತ್ಮವೆ ಕೆಲವರಲ್ಲಿ ಜ್ಞಾಪಕ ತಂದುಕೊಟ್ಟು ನಿರೂಪಿಸಿದೆಯೆಂದು ಗ್ರಹಿಸಬಹುದು. ಸ್ವತಃವಾಗಿ ಆತ್ಮ ತಿಳಿಸಿದ ವಿಷಯ ವಾದ್ದರಿಂದ ಪುನರ್ಜನ್ಮ ವಿಷಯಗಳನ್ನು ಎಲ್ಲರೂ ಶಾಸ್ತ್ರಬದ್ಧವಾಗಿ ತಿಳಿದು ಕೊಳ್ಳೋಣ. ಪುನರ್ಜನ್ಮಗಳಿವೆಯೆಂದು ಇತರರಿಗೂ ಸಹ ತಿಳಿಸೋಣ.

ಮುಕ್ತಾಯ

ಇಂತಿ,

ತ್ರಿಮತ ಏಕೈಕ ಗುರುವು

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**



**ಒಂದು ವಿಷಯವನ್ನು ಸಮರ್ಥಿಸುವುದಕ್ಕೆ ಶಾಸ್ತ್ರವು ಎಷ್ಟು ಅವಶ್ಯವೋ, ಹಾಗೆಯೇ ಒಂದು ವಿಷಯವನ್ನು ಖಂಡಿಸುವುದಕ್ಕೆ ಶಾಸ್ತ್ರವು ಅಷ್ಟೇ ಅವಶ್ಯವಾಗುತ್ತದೆ.**

**ಅಸತ್ಯವನ್ನು ಸಾವಿರಜನ ಹೇಳಿದರೂ ಅದು ಸತ್ಯವಲ್ಲ,**
**ಸತ್ಯವನ್ನು ಸಾವಿರಜನ ಅಲ್ಲಗಳೆದರೂ ಅದು ಅಸತ್ಯವಲ್ಲ.**



# ಇಂದೂ– ಹಿಂದೂ

**ಇಂದೂ = ಚಂದ್ರನು = ಜ್ಞಾನಿ**
**ಹಿಂದೂ = ಅರ್ಥರಹಿತ = ಜ್ಞಾನವಿಲ್ಲದ** } ಪ್ರಬೋಧಾನಂದ ಯೋಗೀಶ್ವರರು

**ಹಿಂದೂ = ಕಳ್ಳ = ದಯಾನಂದ ಸರಸ್ವತಿ (ಗುರೂಜೀ ಸಮಗ್ರ ಗ್ರಂಥಾವಲಿ)**

**ಹಿಂದೂ=ಬೇವಕೂಫ್=ನೃಸಿಂಹಾನಂದ ಭಾರತಿ (ಹೈಂದವ ಶಂಖಾರಾವಮು)**

▶ ಚಿನಜೀಯರ್ ಮುಂತಾದ ಬಹಳ ಮಂದಿ ಸ್ವಾಮೀಜಿಯರು ಹಿಂದೂ ಶಬ್ದವನ್ನು ಬಳಸಬಾರದೆಂದಿದ್ದಾರೆ. ಆ ಪದವನ್ನು ಬಳಸಿದರೇ ನಮ್ಮ ತಲೆಯನ್ನು ನಾವೇ ಕಡೆದುಕೊಂಡಂತೆ ಎಂದು ತಮ್ಮ ಉಪನ್ಯಾಸಗಳಲ್ಲಿ ಹೇಳಿದ್ದಾರೆ. ಬಹಳ ಮಂದಿ ಸ್ವಾಮೀಜಿಯರು ಈ ಶಬ್ದವನ್ನು ವಿದೇಶೀಯರಾದ ಮುಸ್ಲೀಮ್‌ರು ನಮಗೆ ಅತ್ತಗಟ್ಟುತ್ತಿದ್ದಾರೆ. ಅವರ ಭಾವದಲ್ಲಿ ಹಿಂದೂ ಎಂದರೇ ಬುದ್ಧಿ ಕಡಿಮೆಯವರೆಂದು ಅರ್ಥವಂತೆ.

▶ ಬೃಹಸ್ಪತಿ ಆಗಮವನ್ನು ಅನುಸರಿಸಿ ಪೂರ್ವದಲ್ಲಿ ಈದಿನ ನಾವು ಕರೆಯುವ ಹಿಂದೂ ಸಮುದ್ರವನ್ನು **"ಇಂದೂ ಸರೋವರವೆಂದು"** ಕರೆಯುತ್ತಿದ್ದರು.

▶ ನೆಹ್ರೂ ತನ್ನ ಮಗಳಾದ ಇಂದಿರಾಗಾಂಧೀಯನ್ನು ಪ್ರೀತಿಯಿಂದ ಇಂದೂ ಎಂದು ಕರೆಯುತ್ತಿದ್ದನು. ಇಂದೂ ಎಂದರೇ **'ಜ್ಞಾನಿ'** ಎಂದು ಅರ್ಥ.

▶ ಕಾಶೀ ಇನ್ನೂ ಮುಂತಾದ ನತರಗಳು ಅರ್ಧ ಚಂದ್ರಾಕಾರದ ಆಕೃತಿಯಲ್ಲಿ ಡೊಂಕು ತಿರಿಗಿವೆ. ಚಂದ್ರನನ್ನು **'ಇಂದೂ'** ಎನ್ನುತ್ತಾರೆ.

▶ ಹಿಂದೂ ಸಮುದ್ರ ಜ್ಞಾನ ನಿಲಯಕ್ಕೆ ಗುರುತು ಆದ್ದರಿಂದ ಅದನ್ನು ಪೂರ್ವದಲ್ಲಿ **'ಇಂದೂ ಮಹಾ ಸಮುದ್ರ'**ವಾಗಿ ಕರೆಯುತ್ತಿದ್ದರು. (**"ತ್ರೈತಾಕಾರ ರಹಸ್ಯ"** ಎಂಬ ಗ್ರಂಥದಲ್ಲಿ ಇದೆ.)

▶ ಭಾರತ ದೇಶ ಪೂರ್ವದಲ್ಲಿ ಜ್ಞಾನವಿರುವ ದೇಶ. ಆದ್ದರಿಂದ ಭಾರತದೇಶವನ್ನು ಇಂದೂ ದೇಶವೆಂದೂ, ಭಾರತೀಯರನ್ನು ಇಂದೂಗಳೆನ್ನುತ್ತಿದ್ದರು.

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಸುವಾರ್ತ ಕ್ರೈಸ್ತವ ಸಂಘ







**ಸುವಾರ್ತ ಕ್ರೈಸ್ತವ ಸಂಘ (S.K.S)**

**(Regd.No.: 159/2015)**

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@suvarthakraisthavasangham.org

***www. suvarthakraisthavasangham.org***

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಪ್ರಬೋಧ ಸೇವಾ ಸಮಿತಿ




**ಪ್ರಬೋಧ ಸೇವಾ ಸಮಿತಿ (P.S.S.)**

(Regd.No.: 304/1991)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@thraithashakam.org

*www. thraithashakam.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ




(Regd.No.459/20111)

**ಖುದಾ ಇಸ್ಲಾಮಿಕ್ ಸ್ಪಿರಿಚ್ಯುವಲ್ ಸೊಸೈಟೀ (K.I.S.S)**

(Regd.No.: 459/2011)

ಚಿನ್ನಪೊಡಮಲ(ಗ್ರಾ), ತಾಡಿಪತ್ರಿ(ಮಂ), ಅನಂತಪುರಂ (ಜಿಲ್ಲಾ), ಆಂಧ್ರಪ್ರದೇಶ್-515411

e-mail id : info@khudaislamicspiritualsociety.org

*www. khudaislamicspiritualsociety.org*

ಮೂಲ ಕರ್ತ

ತ್ರಿಮತ ಏಕೈಕ ಗುರುವು, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

# ದ್ರಾವಿಡ ಶ್ರೇಷ್ಠಿ ಸಂಘ




**ದ್ರಾವಿಡ ಶ್ರೇಷ್ಠಿ ಸಂಘ** (D.S.S)

**(Regd.No.: /2015)**

ಕೃಷ್ಣಾ ನಗರ್ ಕಾಲನೀ, ಕೊತ್ತಕೋಟ(ಮಂ),

ಮಹಬೂಬ್‌ನಗರ್ (ಜಿಲ್ಲಾ), ತೆಲಂಗಾಣ-509381

e-mail id : info@dravidashreshtisangham.org

***www.dravidashreshtisangham.org***

# The Secret of Rebirth



ಮೊದಲಿನ ಪ್ರಬೋಧಾನಂದ ಯೋಗೀಶ್ವರರು

Author :
The Only GURU of Three Religions
The Spiritual Emperor, Thraitha Theorem Originator
Sri Acharya Prabodhananda Yogeeshwarulu

www.thraithashakam.org